# “ಬೇಂದ್ರೆ ಅವರ ಕಾವ್ಯಗಳಲ್ಲಿ ಪ್ರೇಮದ ಪರಿಕಲ್ಪನೆ”

## ಒಂದು ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ನಿಬಂಧ)


ಸಂಶೋಧಕ

ಸಿ.ಎಸ್. ಮೋಹನ

ಮಾರ್ಗದರ್ಶಕರು

ಡಾ|| ಚಂದ್ರು ಕಾಳೇನಹಳ್ಳಿ





ಕರ್ನಾಟಕ ಸಂಘ (ರಿ), ಮಂಡ್ಯ.
ಎಂ. ಎಚ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭-೨೦೦೮



497

# “ಬೇಂದ್ರೆ ಅವರ ಕಾವ್ಯಗಳಲ್ಲಿ ಪ್ರೇಮದ ಪರಿಕಲ್ಪನೆ”

## ಒಂದು ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ನಿಬಂಧ)

ಸಂಶೋಧಕ
**ಸಿ.ಎಸ್. ಮೋಹನ**

ಕನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಾರ್ಗದರ್ಶಕರು
**ಡಾ॥ ಚಂದ್ರು ಕಾಳೇನಹಳ್ಳಿ**






ಕರ್ನಾಟಕ ಸಂಘ (ರಿ), ಮಂಡ್ಯ.
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

**೨೦೦೭-೨೦೦೮**

# ದೃಢೀಕರಣ

ಎಂ.ಫಿಲ್. ತರಗತಿಯ ವಿದ್ಯಾರ್ಥಿಯಾದ ಸಿ.ಎಸ್. ಮೋಹನ, ನನ್ನ ಮಾರ್ಗದರ್ಶನದಲ್ಲಿ **"ಬೇಂದ್ರೆ ಅವರ ಕಾವ್ಯಗಳಲ್ಲಿ ಪ್ರೇಮದ ಪರಿಕಲ್ಪನೆ"** ಎಂಬ ನಿಬಂಧವನ್ನು ಎಂ.ಫಿಲ್. ತರಗತಿಯ ಕನ್ನಡ ಸಂಶೋಧನಾ ನಿಬಂಧವನ್ನು ಕನ್ನಡ ವಿಶ್ವ ವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮಾ, ಎಂ.ಫಿಲ್. ಅಥವಾ ಯಾವುದೇ ಪ್ರಶಸ್ತಿಗಾಗಲಿ ಅರ್ಪಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಚನ್ನರಾಯಪಟ್ಟಣ
ದಿನಾಂಕ : ೧೦.೯.೨೦೦೮

ಮಾರ್ಗದರ್ಶಕರು
**ಡಾ|| ಚಂದ್ರು ಕಾಳೇನಹಳ್ಳಿ**
ಪ್ರೊಫೆಸರ್, ಕನ್ನಡ ವಿಭಾಗ
ಶ್ರೀ ಆದಿಚುಂಚನಗಿರಿ ಪ್ರಥಮದರ್ಜೆ ಕಾಲೇಜು
ಚನ್ನರಾಯಪಟ್ಟಣ, ಹಾಸನ ಜಿಲ್ಲೆ

# ಅಭ್ಯರ್ಥಿಯ ಘೋಷಣೆ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಬೇಂದ್ರೆ ಅವರ ಕಾವ್ಯಗಳಲ್ಲಿ ಪ್ರೇಮದ ಪರಿಕಲ್ಪನೆ"** ವಿಷಯವನ್ನು ಆಯ್ಕೆ ಮಾಡಿಕೊಂಡು **ಡಾ|| ಚಂದ್ರು ಕಾಳೇನಹಳ್ಳಿ** ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ದಿನಾಂಕ : ೧೦.೦೯.೨೦೦೮ ಸಹಿ

10/09/2008

**(ಸಿ.ಎಸ್. ಮೋಹನ)**

# ಪರಿವಿಡಿ



ಕನ್ನಡ ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ. ಹಂಪಿ.

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಹೊಸಗನ್ನಡ ಸಾಹಿತ್ಯವು ನವೋದಯದ ಆರಂಭದೊಂದಿಗೆ ನವ್ಯ ಪ್ರಗತಿಶೀಲ, ದಲಿತ-ಬಂಡಾಯಗಳೆಂಬ ವಿವಿಧ ಮನೋಧರ್ಮಗಳ ವೈವಿಧ್ಯಮಯ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿತು. ಈ ನಾಲ್ಕು ಘಟ್ಟಗಳಲ್ಲಿ ಪ್ರಗತಿಶೀಲ ಸಂದರ್ಭವನ್ನು ಹೊರತುಪಡಿಸಿದರೆ ಕಾವ್ಯ ಪ್ರಕಾರ ಅತ್ಯಂತ ಪರಿಷ್ಕೃತವಾಗಿ ಬೆಳೆದುಬಂದಿತು. ನವೋದಯದ ಕಾಲಘಟ್ಟದಲ್ಲಿ ಕಾವ್ಯ ಪ್ರಕಾರ ಸಂಖ್ಯೆ ಹಾಗೂ ಸಂವೇದನೆ ಈ ಎರಡರ ದೃಷ್ಟಿಯಿಂದಲೂ ವಿಶೇಷತೆಯನ್ನು ಪಡೆದುಕೊಂಡಿತು. ಹೊಸಗನ್ನಡ ಸಾಹಿತ್ಯದಲ್ಲಿ ಅನೇಕಾನೇಕ ಮಹತ್ವದ ಇತಿಹಾಸ ಸೃಷ್ಟಿಸಿದ ಕವಿಗಳು ಬಂದರು.

ಹಲವು ಲಕ್ಷ್ಯ-ಲಕ್ಷಣಗಳ ಪರಿಧಿಯಿಂದ ತನ್ನನ್ನು ಬಿಡಿಸಿಕೊಂಡು ಸ್ವತಂತ್ರವಾಗಿ ಯುಗಧರ್ಮಕ್ಕೆ ಅನುಗುಣವಾಗಿ ಹೊಸ ಆಯಾಮದೊಂದಿಗೆ ನವೋದಯ ಕಾವ್ಯ ಬೆಳೆದು ನಿಂತಿತು. ಕಾಲಕ್ಕೆ ಅನುಸಾರವಾಗಿ ಭಾಷೆ ಮತ್ತು ವಸ್ತುಗಳ ಬಳಕೆಯಲ್ಲಿ ವೈವಿಧ್ಯತೆಯನ್ನು ಹೊಂದಿಕೊಂಡಿತು. ಪಾಶ್ಚಾತ್ಯ ಪ್ರೇರಣೆ ಹಾಗೂ ಭಾರತೀಯ ಪರಂಪರೆ ಈ ಎರಡರ ಸತ್ವವನ್ನು ಒಳಗೊಂಡ ಕಾವ್ಯಗಳು ಹೊಸ ಎಚ್ಚರದೊಂದಿಗೆ ಅಭಿವ್ಯಕ್ತಿಗೊಂಡವು. ಇಂಗ್ಲೀಷ್ ಭಾಷೆ ಹಾಗೂ ಸಾಹಿತ್ಯದ ಓದಿನಿಂದ ಜಾಗೃತ ಮನಸ್ಕರಾದ ಸಾಹಿತಿಗಳು ಸ್ವಾತಂತ್ರಪ್ರಜ್ಞೆ ಹಾಗೂ ಸಾಮಾಜಿಕ ಅರಿವಿನ ಹಿನ್ನೆಲೆಯಲ್ಲಿ ಮುಖಮಾಡಿದರು. ಸಾಹಿತ್ಯ ಹಾಗೂ ಸಮಾಜದ ಸಂಬಂಧ ಅವಿನಾಭಾವವಾಗಿರುವುದರಿಂದಲೇ ಸಾಮಾಜಿಕ ಹೊಣೆಗಾರಿಕೆಯೊಂದಿಗೆ ಸಾಹಿತ್ಯ ನಿರ್ಮಾಣಗೊಂಡಿತು. ಏಕಕಾಲಕ್ಕೆ ವ್ಯಕ್ತಿ ಹಾಗೂ ಸಮಷ್ಠಿಯ ಬದ್ಧತೆ ಸಾಹಿತ್ಯ ಮುಖೇನ ಹೊರಹೊಮ್ಮಿತು.

ಶತ-ಶತಮಾನಗಳ ಸಾಹಿತ್ಯ ಹಾಗೂ ಸಾಮಾಜಿಕ ಪರಂಪರೆಗಳ ಪ್ರಭಾವ ಹಾಗೂ ಹೊಣೆಗಾರಿಕೆ ಎರಡಕ್ಕೂ ಬದ್ಧವಾದ ಸಾಹಿತಿ ಹೊಸತನದೊಂದಿಗೆ ಸಾಹಿತ್ಯವನ್ನು ನಿಭಾಯಿಸತೊಡಗಿದ ಇಂಗ್ಲೀಷ್ ಸಾಹಿತ್ಯದ ಅಧ್ಯಯನ ನಡೆಸಿದ ನಮ್ಮ ಸಾಹಿತಿಗಳು ಆ ಮಾದರಿಯ ಕಾವ್ಯಗಳನ್ನೇ ಮಾದರಿಯಾಗಿರಿಸಿಕೊಂಡು 'ಇಂಗ್ಲೀಷ್ ಗೀತೆಗಳು'ಆಂಗ್ಲ ಕವಿತಾವಳಿ' ಸಂಕಲನಗಳನ್ನು ಕನ್ನಡಕ್ಕೆ ತಂದರು. ಗೋವಿಂದಪೈ, ಬಿ.ಎಂ. ಶ್ರೀಯವರು ಛಂದಸ್ಸುಗಳ ಹೊಸ ಪ್ರಯೋಗಗಳಲ್ಲಿ ತೊಡಗಿದರು. ಸಾಲಿ ರಾಮಚಂದ್ರರಾಯ, ಶಾಂತ ಕವಿಗಳು, ಹಟ್ಟಿಯಂಗಡಿ ನಾರಾಯಣರಾಯರು ಈ ಕಾಲದಲ್ಲಿ ಹೊಸ ಸಾಧ್ಯತೆಗಳನ್ನು ಕಂಡುಕೊಂಡರು. ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿ ಭಾರತೀಯ ಸಾಹಿತ್ಯ ಸಂಸ್ಕೃತಿಯೊಂದಿಗೆ ಮುಖಾಮುಖಿಯಾಗಿದ್ದರ ಪರಿಣಾಮ ಇಲ್ಲಿ ನವೋದಯ ಸಾಹಿತ್ಯ ಆರಂಭವಾಯಿತು. ಕನ್ನಡ ನಾಡಿನ ತುಂಬೆಲ್ಲಾ ನವೋದಯ ಕಾವ್ಯಗಳು ಆರಂಭವಾದವು. ಧಾರವಾಡದಲ್ಲಿ ಗೆಳೆಯರ ಗುಂಪಿನ ಬಳಗ-ಬೇಂದ್ರೆ, ಮಧುರ ಚೆನ್ನ, ಆನಂದಕಂದ, ರಂ. ಶ್ರೀ ಮುಗಳಿ, ಗೋಕಾಕ್‌ರು ಸಾಹಿತ್ಯ ಕೃಷಿಯಲ್ಲಿ ಅದರಲ್ಲೂ ಕಾವ್ಯ ಕ್ಷೇತ್ರದಲ್ಲಿ ಮುಂದುವರಿದರು. ಮೈಸೂರು ಪ್ರಾಂತ್ಯದಲ್ಲಿ ಮಾಸ್ತಿ, ಕುವೆಂಪು, ಪು.ತಿ.ನ., ರಾಜರತ್ನಂ, ಕೆ.ಎಸ್. ನರಸಿಂಹಸ್ವಾಮಿಯವರು ಪ್ರಾದೇಶಿಕ ಸತ್ವದೊಂದಿಗೆ ಕಾವ್ಯ ಕೃಷಿಯಲ್ಲಿ ತೊಡಗಿದರು. ದಕ್ಷಿಣ ಕನ್ನಡದಲ್ಲಿ ಪಂಜೆ ಮಂಗೇಶರಾಯ, ಗೋವಿಂದ ಪೈ, ಕಡೆಂಗೋಡ್ಲು ಶಂಕರಭಟ್ಟ, ಎಂ.ಎನ್. ಕಾಮತ್, ಪೇಜಾವರ ಸದಾಶಿವರಾಯರು ದೇಶೀ ಸಂಸ್ಕೃತಿಯ ಸತ್ವದೊಂದಿಗೆ ನವೋದಯ ಪರಂಪರೆಯ ನಿರ್ಮಾಣಕ್ಕೆ ಕಾರಣರಾದರು.

ಈ ಎಲ್ಲ ಸಾಹಿತಿಗಳು ನವೋದಯ ಪರಂಪರೆಗೆ ಅಮೂಲ್ಯ ಕೊಡುಗೆಯನ್ನೇ ನೀಡಿದ್ದಾರೆ. ಉತ್ತರ ಕರ್ನಾಟಕದ ಗೆಳೆಯರ ಗುಂಪಿನ ನಾಯಕತ್ವವನ್ನು ವಹಿಸಿದ ದ.ರಾ. ಬೇಂದ್ರೆಯವರು ನವೋದಯ ಸಾಹಿತಿಗಳಲ್ಲಿ ಕವಿಗಳಲ್ಲಿ ಪ್ರಮುಖರು. ಸೂಕ್ಷ್ಮ ಸಂವೇದನೆಯುಳ್ಳ ಬದುಕು ಬರಹಗಳೆರಡರಲ್ಲೂ

ಅನನ್ಯತೆಯನ್ನು ಸಾಧಿಸಿದ ಬೇಂದ್ರೆ ಅವರ ಸಾಹಿತ್ಯಿಕ ಸಾಧನೆ ಕನ್ನಡದ ಪಾಲಿಗೆ ಕೊಡುಗೆಯಾಗಿದೆ. ಆಧುನಿಕ ಶಿಕ್ಷಣ, ಮರಾಠಿ ಕವಿಗಳು, ಸಂಸ್ಕೃತದ ಕಾಳಿದಾಸ, ಭಾರತೀಯ ಮಹಾನ್ ಸಾಧಕರು, ಗೆಳೆತನದ ಸಖ್ಯ. ಮನೆಯ ಸುಸಂಸ್ಕೃತ ಪರಿಸರ, ಧಾರವಾಡದ ಕಾಮನಕಟ್ಟೆ, ಹಾವಾಡಿಗರ, ಜಾದೂಗಾರರ ಆಟ-ಪಾಟಗಳು, ಉತ್ತರ ಕರ್ನಾಟಕದ ಜಾತಿ-ಒಳಜಾತಿಗಳ ಗ್ರಾಮ್ಯಗಳನ್ನು ತಮ್ಮದಾಗಿಸಿಕೊಂಡ ಬೇಂದ್ರೆ, ಕನ್ನಡ ಸಾಹಿತ್ಯಕ್ಕೆ ಅತ್ಯದ್ಭುತವಾದ ಕಾವ್ಯ ಸಂಕಲನಗಳನ್ನು ನೀಡಿದ್ದಾರೆ. ಯುಗಧರ್ಮಕ್ಕೆ ಅನುಗುಣವಾಗಿ ನವೋದಯ ಕಾವ್ಯ ಪಂಥದ ಎಲ್ಲ ಗುಣ ಲಕ್ಷಣಗಳನ್ನು ತಮ್ಮದಾಗಿಸಿಕೊಂಡು ಕೃತಿಗಳನ್ನು ರಚಿಸಿದರು.

'ತಾವು ಪಟ್ಟ ಪಾಡನ್ನು ಹಾಡಾಗಿಸುತ್ತಾ' ಅಂದಿನ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ಜಾನಪದ ಸತ್ಯವನ್ನು ಕಾವ್ಯಕ್ಕೆ ಅಳವಡಿಸಿಕೊಳ್ಳುತ್ತಾ ಹೊಸ ಸಾಧ್ಯತೆಗಳನ್ನು ಸಾಧಿಸಿದರು. ಗ್ರಾಮ್ಯ ಭಾಷೆಯಲ್ಲಿ ಮಾತ್ರ ನಿಜವಾದ ಕನ್ನಡ ಕೆಚ್ಚಿನ ಸಂಪತ್ತಿದೆ ಎಂದು ಅರ್ಥೈಸಿಕೊಂಡ ಬೇಂದ್ರೆ ಜಾನಪದ ಮಾಧ್ಯಮವನ್ನು ಸಮರ್ಥವಾಗಿ ಬಳಸಿಕೊಂಡರು. ಬಿ.ಎಂ.ಶ್ರೀ, ಗೋಕಾಕ್, ತೀ.ನಂ.ಶ್ರೀ, ಪು.ತಿ.ನ., ರಂ.ಶ್ರೀ.ಮುಗಳಿ, ವೀ.ಸೀತಾರಾಮಯ್ಯ, ಕುವೆಂಪು ಇವರೆಲ್ಲಾ ಆಧುವಿಕ ಸುಶಿಕ್ಷಿತ ಭಾಷೆಯನ್ನೇ ಸಾಹಿತ್ಯಕ್ಕೆ ರೂಢಿಸಿಕೊಂಡರು. ಬೇಂದ್ರೆ ಇವರೆಲ್ಲರ ನಡುವೆ ಭಿನ್ನವಾಗಿ ನಿಂತು ಅಶಿಕ್ಷಿತರ ಗ್ರಾಮ್ಯ ಭಾಷೆಗೆ ಒಲಿದರು. ಇವರ ಭಾಷಾ ಶೈಲಿ ನವೋದಯ ಸಾಹಿತಿಗಳಲ್ಲಿ ಅತ್ಯಂತ ವಿಶಿಷ್ಟವಾಗಿದೆ.

ಜೀವನದ ಮೂಲಭೂತ ಪ್ರವೃತ್ತಿಗಳನ್ನು, ಭಾವನೆಗಳನ್ನು ಜನಪದ ಧಾಟಿಯಲ್ಲೇ ಪ್ರಕಟಿಸಬೇಕೆಂಬ ಇವರ ಹೊಸ ಪ್ರಜ್ಞೆ ಅನೇಕರಿಗೆ ಮಾದರಿಯಾಯಿತು. ಭಾಷೆ ಮಾತ್ರವಲ್ಲದೆ ವಸ್ತುಗಳಿಗೆ ಸಂಬಂಧ ಪಟ್ಟಂತೆ, ಗಂಡು ಹೆಣ್ಣಿನ ವೈಯಕ್ತಿಕ ವಿಷಯಕ್ಕೆ ಸಂಬಂಧಿಸಿದಂತೆ ನವೋದಯ ಕವಿಗಳೆಲ್ಲರೂ ಆದರ್ಶದ ನಿಲುವನ್ನೇ ತಾಳಿದ್ದಾರೆ. ಆದರ್ಶೀಕೃತ ಪ್ರೇಮ ಅಮೂರ್ತ ಪರಿಕಲ್ಪನೆಯಲ್ಲಿ ಮೂಡಿ ಬಂದಿದೆ. ಈ ಕಾಲದ ಎಲ್ಲ ಕವಿಗಳು ಒಟ್ಟು ಒಲವು ಅಮೂರ್ತವಾದ ಪ್ರೇಮದ ಪರಿಕಲ್ಪನೆಯಲ್ಲಿ ನವೋದಯದ ಇನ್ನಿತರ ಕವಿಗಳಿಗಿಂತ ಭಿನ್ನರಾಗಿದ್ದಾರೆ. ದಾಂಪತ್ಯದ ಚೌಕಟ್ಟಿನಡಿಯಲ್ಲಿ ಸತಿ-ಪತಿಯರ ಸಂಬಂಧವನ್ನು ವೈಭವೀಕರಣ ಮಾಡಿದಂತೆಯೇ, ಐಂದ್ರಿಕ ವಿವರದಲ್ಲೂ ಬೇಂದ್ರೆ ಮುಂದಿದ್ದಾರೆ. ನವೋದಯ ಕವಿಗಳಲ್ಲಿ ಲೈಂಗಿಕ ಸಂಬಂಧ ವಿವರಗಳಿಗೆ ಆದ್ಯತೆ ನೀಡಿಲ್ಲ. ಅದರೆ ಬೇಂದ್ರೆ ಬರೆದ ಪ್ರೇಮ ಕವನಗಳು ಕನ್ನಡ ನವೋದಯ ಕಾವ್ಯಕ್ಕೆ ಹೊಸದೊಂದು ಆಯಾಮವನ್ನು ಸೇರಿಸಿದೆ.

ಪ್ರೇಮ ಸ್ವರೂಪದ ಹಲವು ಬಗೆಗಳು ಅವರ ಕಾವ್ಯದಲ್ಲಿ ಅನೇಕ ಸಂಬಂಧಗಳಲ್ಲಿ ವ್ಯಕ್ತವಾಗುತ್ತವೆ. ದಾಂಪತ್ಯದ ಪೂರ್ವದ ಅದರಲ್ಲೂ ಹದಿಹರೆಯದ ಗಂಡು-ಹೆಣ್ಣಿನ ನಡುವಿನ ಪ್ರೇಮ, ದಾಂಪತ್ಯದ ಚೌಕಟ್ಟಿನ ಸತಿ-ಪತಿ, ದಾಂಪತ್ಯದಲ್ಲಿ, ಸಖ್ಯ-ಸಖಿಯಾಗುವ - ಅನುಭಾವಿಕ ಲೋಕ, ಮಗುವಿಗೆ ತಾಯಿ ನೀಡುವ ವಾತ್ಸಲ್ಯದ ಪ್ರತೀಕವಾಗುವ ಕರುಳಿನ ವಚನಗಳು - ಹೀಗೆ ಬೇಂದ್ರೆ ಕಾವ್ಯದಲ್ಲಿ ಪ್ರೇಮ ಹಲವು ಮುಖಗಳಲ್ಲಿ ಅವಿಷ್ಕಾರಗೊಂಡಿದೆ. ಈ ಹಿನ್ನೆಲೆಯಲ್ಲಿ ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಬೇಂದ್ರೆ ಅವರ ಕಾವ್ಯದ ಪ್ರೇಮ ನವೋದಯ ಕವಿಗಳಲ್ಲೇ ಭಿನ್ನ ಸ್ವರೂಪವನ್ನು ಪಡೆದಿರುವುದು ಸ್ಪಷ್ಟವಾಗುತ್ತದೆ.

ತಮ್ಮ ವೈಯಕ್ತಿಕ ಬದುಕಿನ ಪ್ರೇಮ ಭಾವವನ್ನು ಹಲವು ಬಿಡಿ ಕವನಗಳಲ್ಲಿ ಚಿತ್ರಿಸಿದ್ದಾರೆ. 'ಸಖೀಗೀತ' ಅವರ ದಾಂಪತ್ಯದ 'ಬಿಚ್ಚು ಸ್ಮೃತಿ'ಗಳಿಗೆ ಸಾಕ್ಷಿಯಾಗಿದೆ. ನವೋದಯ ಸಾಹಿತ್ಯದಲ್ಲಿ ಪ್ರೇಮದ, ಸಖ್ಯದ ಆಖ್ಯಾನಕ್ಕೆ ಸುದೀರ್ಘ ವ್ಯಾಖ್ಯಾನ ನೀಡಿರುವ ಬೇಂದ್ರೆ ಅವರ ಕಾವ್ಯಗಳಲ್ಲಿ ಪ್ರೇಮದ ಪರಿಕಲ್ಪನೆ. ಅಧ್ಯಯನ ಯೋಗ್ಯವಾಗಿರುವುದನ್ನು ನಾವು ಅಲ್ಲಗಳೆಯುವ ಹಾಗಿಲ್ಲ. ಕುವೆಂಪು ಅವರು ದಾಂಪತ್ಯ ಚೌಕಟ್ಟಿನಲ್ಲಿ

ಸತಿ-ಪತಿಯ ಆದರ್ಶೀಕರಣದ ದೈವಿಕತೆಯನ್ನು ಚಿತ್ರಿಸಿದ್ದರೂ ಉಳಿದಂತೆ ಬೇಂದ್ರೆ ಎಲ್ಲರಿಗಿಂತಲೂ ವಿಭಿನ್ನ ದಾರಿಯಲ್ಲಿದ್ದಾರೆ.

ಬೇಂದ್ರೆ ಹೆಣ್ಣನ್ನು "ಮಾತೃತತ್ವ'ದ ಹಿನ್ನೆಲೆಯಲ್ಲೂ,ಗಂಡು- ಹೆಣ್ಣಿನ ಸಂಬಂಧವನ್ನು 'ಪ್ರಕೃತಿ-ಪುರುಪುರುಷ ಎಂಬ ತಾತ್ವಿಕ ನೆಲೆಯ ಸಂಕೇತದಲ್ಲೂ ಗ್ರಹಿಸಿದ್ದಾರೆ. ಕವಿಯ ಪ್ರೇಮದ ಸೃಜನ ಶೀಲತೆಯ ಸ್ವರೂಪದಲ್ಲಿ ಚಿತ್ರಿತವಾಗಿದೆ. ಪ್ರೇಮ ವ್ಯಕ್ತಿತ್ವದ ಅಂಶವೇ ಆಗಿರುವುದರಿಂದ, ಈ ಪ್ರೇಮದ ಹಲವು ಸ್ವರೂಪಗಳನ್ನು ಹಲವು ವಿಭಿನ್ನ ಮುಖಗಳಲ್ಲಿ ಶೋಧಿಸುವ ಆಶಯದೊಂದಿಗೆ ಬೇಂದ್ರೆ ಅವರ ಕಾವ್ಯದಲ್ಲಿ ಪ್ರೇಮದ ಪರಿಕಲ್ಪನೆ ಅಧ್ಯಯನ ನಡೆಸಲು ಪ್ರಯತ್ನಿಸಲಾಗಿದೆ.

ಸ್ತ್ರೀ ಸಂವೇದನೆಯ ಮೂಲಭೂತ ಗುಣವುಳ್ಳ ಬೇಂದ್ರೆ ಕವನಗಳಿಗೆ ಸ್ತ್ರೀ ಕುರಿತ ಅಭೂತಪೂರ್ವ ಕಾಳಜಿ ಇದೆ. ಪ್ರೇಮ ಕವನಗಳಿಗೆ ಹೊರತಾಗಿಯೂ ಸ್ತ್ರೀ ಕಾಳಜಿ ಅವರ ಅನೇಕ ಕವಿತೆಗಳಲ್ಲಿ ಕಳಕಳಿಯೊಂದಿಗೆ ಪ್ರಕಟವಾಗಿದೆ. ಕಾವ್ಯನಾಮ 'ಅಂಬಿಕಾತನಯದತ್ತ' ಎಂದು ತನ್ನನ್ನು ತಾಯಿ ಮೂಲದಿಂದಲೇ ಗುರುತಿಸಿಕೊಳ್ಳುವ ಅಂಬಿಕಾತನಯದತ್ತರ ಪ್ರೇಮ ಕಾವ್ಯಗಳನ್ನು ಈ ನೆಲೆಯಿಂದ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ, ವೈಚಾರಿಕ ಹಾಗೂ ಸಾಹಿತ್ಯಿಕ ಹಿನ್ನೆಯಲ್ಲಿ ಇವರ ಕವನಗಳ ಅಗತ್ಯತೆಯನ್ನು ಇಲ್ಲಿ ಪರಿಗಣಿಸಲಾಗಿದೆ. ಈ ಪ್ರಮುಖ ಅಂಶಗಳ ಹಿನ್ನೆಲೆಯಲ್ಲಿ **' ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮದ ಪರಿಕಲ್ಪನೆ'** ಎಂಬ ವಿಷಯವನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಕಂಡ ಅಧ್ಯಾಯಗಳ ಮೂಲಕ ವಿಂಗಡಿಸಲಾಗಿದೆ. ೧) ನವೋದಯ ಸಾಹಿತ್ಯದ ಹಿನ್ನೆಲೆ ೨) ಬೇಂದ್ರೆಯವರ ಬದುಕು ಮತ್ತು ಸಾಧನೆ ೩) ಬೇಂದ್ರೆ ಕಾವ್ಯಗಳು ೪) ನವೋದಯ ಕಾವ್ಯಗಳಲ್ಲಿ ಪ್ರೇಮಗೀತೆಗಳು, ೫) ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮದ ಪರಿಕಲ್ಪನೆ ೬) ಸಖೀಗೀತ ೭) ಬೇಂದ್ರೆ ಕಾವ್ಯಶೈಲಿ ೮) ಉಪಸಂಹಾರ

ಅಧ್ಯಾಯ ೧

# ನವೋದಯ ಕಾವ್ಯದ ಹಿನ್ನೆಲೆ

ಭಾರತದಲ್ಲಿನ ಚಾರಿತ್ರಿಕ ಬದಲಾವಣೆಯ ಫಲವಾಗಿ ಸಮುದಾಯದಲ್ಲಿ ಅನೇಕಾನೇಕ ಪುನರುಜ್ಜೀವನ ಹಾಗೂ ವಿಕಾಸಗಳು ನಡೆದವು. ಹೊಸಗನ್ನಡ - ಆಧುನಿಕ ಕನ್ನಡ ಎಂಬೆಲ್ಲಾ ಹಣೆ ಪಟ್ಟಿಯೊಂದಿಗೆ ಈವರೆಗೂ ಚಾಲ್ತಿಯಲ್ಲಿದ್ದ ಸಾಹಿತ್ಯಕ್ಕಿಂತ ಭಿನ್ನವಾದ ಸಾಹಿತ್ಯ ಬೆಳವಣಿಗೆಯಲ್ಲಿ ಕಾಣಿಸಿಕೊಂಡಿತು. ಈ ಬೆಳವಣಿಗೆ ಕೇವಲ ಕನ್ನಡದ ಮಟ್ಟಿಗಾಗದೆ ಇಡೀ ಭಾರತೀಯ ಸಾಹಿತ್ಯದಲ್ಲೇ ಸಮಗ್ರವಾಗಿ ಕಾಣಿಸಿಕೊಂಡಿತು. ಶಿಕ್ಷಣ ರಂಗದಲ್ಲಿನ ಇಂಗ್ಲೀಷ್ ಭಾಷೆ, ಸಾಹಿತ್ಯ ಪ್ರಮುಖ ಕಾರಣವಾಗಿತ್ತು. ಪಠ್ಯ ಕ್ರಮದಲ್ಲಿನ ಇಂಗ್ಲೀಷ್ ಭಾಷೆ ಸಾಹಿತ್ಯ ಪ್ರಮುಖ ಕಾರಣವಾಗಿತ್ತು. ಪಠ್ಯ ಕ್ರಮದಲ್ಲಿನ ಇಂಗ್ಲೀಷ್ ರೊಮ್ಯಾಂಟಿಕ್ ಕಾವ್ಯದ ವ್ಯಾಪಕ ಓದು ಸಮಕಾಲೀನ ಸಾಹಿತ್ಯ ಓದಿನ ಕಡೆಗೆ ಗುಣಾತ್ಮಕ ಅಂಶವಾಗಿ ಸೆಳೆಯಿತು. ಈ ಹಿನ್ನೆಲೆಯಲ್ಲಿ ನವೋದಯ ಎಂಬ ಪಂಥದ ಸಂದರ್ಭಕ್ಕೆ ಕೆಲವೊಂದು ಅಂಶಗಳನ್ನು ನಾವು ಗಮನಿಸಬಹುದಾಗಿದೆ.

### ೧:೧ ನವೋದಯ

೧೯೫೦ ರ ಕಾಲದ ನವ್ಯ ಸಾಹಿತ್ಯದ ಆರಂಭ ಘಟ್ಟದಲ್ಲಿ ಈ ಹಿಂದಿನ ಸಾಹಿತ್ಯವನ್ನು ಹೊಸಗನ್ನಡ ಕಾವ್ಯ, ಆಧುನಿಕ ಕನ್ನಡ ಕಾವ್ಯ ಎಂಬೆಲ್ಲಾ ಹೆಸರಿನಿಂದ ಗುರುತಿಸಿದರು. ಭಾರತೀಯ ಅಂಥಃಸತ್ವದಿಂದ ಪರಿಪುಷ್ಟವಾಗಿದ್ದು ಕೆಲ ಅಭಿವ್ಯಕ್ತಿಗಳ ವಿವರಗಳನ್ನು ಪಡಕೊಂಡ ಕಾವ್ಯವನ್ನು 'ಕುವೆಂಪು' ಅವರು 'ನವೋದಯ' ೧ ಎಂದು ಹೆಸರಿಸಿದರು. ಇದು ಸಾಹಿತ್ಯಿಕ ಚಳುವಳಿಯಾಗಿ ವಿಶಿಷ್ಠ ಮನೋಧರ್ಮವಾಗಿ ಕಾಣಿಸಿಕೊಂಡಿತು.

### ೧:೧:೧ ಪಾಶ್ಚಾತ್ಯ ಪ್ರಭಾವ

ಇಂಗ್ಲೀಷ್ ಶಿಕ್ಷಣ ಕ್ರಮ ಹಾಗೂ ಸಾಹಿತ್ಯದ ಹೊಸ ಓದು ಅಂದಿನ ತರುಣ ವರ್ಗದಲ್ಲಿ ಪರಿವರ್ತನೆ ಹಾಗೂ ಪ್ರಭಾವಗಳೆರೆಡನ್ನೂ ಬೀರಿತು. ಮೂಲಭೂತವಾಗಿ ಸಂಪೂರ್ಣ ಬದಲಾವಣೆಯನ್ನು ಬಯಸದ - ಹಿಂದಿನ ಸಾಹಿತ್ಯದ ಭದ್ರ ಬುನಾದಿಯೊಂದಿಗೆ ಸುಧಾರಣ ಮನೋವೃತ್ತಿಯ ಹೊಸ ವಿವರಗಳು ಕಂಡುಬಂದವು. ಬೌದ್ಧಿಕ ಗ್ರಹಿಕೆಯಲ್ಲಿನ ವೈವಿಧ್ಯತೆ ಹಲವು ವೈಜ್ಞಾನಿಕ ವೈವಿಧ್ಯತೆಗೂ ಕಾರಣವಾಯಿತು. ಸ್ವಾತಂತ್ರ್ಯವು ಒಂದು ಅಮೂಲ್ಯ ಪರಿಕಲ್ಪನೆಯಾಗಿ ನಮ್ಮ ಕವಿಗಳಿಗೆ ಆಕರ್ಷಕವೆನಿಸಿತು. ಷೇಕ್ಸ್‌ಪಿಯರ್, ಸ್ಪೆನ್ಸರ್, ಬರ್ನ್ಸ್, ಬ್ಲೇಕ್, ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್, ಬೈರನ್, ಟೆನಿಸನ್, ಬ್ರೌನಿಂಗ್ ಮೊದಲಾದ ೧೯ನೇ ಶತಮಾನದ ಕವಿಗಳು ನವೋದಯ  ಕಾವ್ಯದ ಮೇಲೆ ಪ್ರಭಾವ ಬೀರಿದರು.

### ೧:೧:೨ ಮತಧರ್ಮ :

ರಾಜತ್ವಗಳ ಕಾವ್ಯ ಪರಂಪರೆಯಲ್ಲಿ ಹಲ ಕೆಲವು ಬದಲಾವಣೆಗಳು ಅಗತ್ಯವಿದೆ ಎಂಬ ಅರಿವುಂಟಾದಾಗ ಭಾವಗೀತೆಗಳ ಸ್ವರೂಪ ಹಾಗೂ ವಸ್ತು ವೈವಿಧ್ಯತೆಗಳು ನವೋದಯ ಕವಿಗಳ ಪಾಲಿಗೆ ಪ್ರಯೋಗದ ಅಂಶಗಳಾದವು. ಶ್ರೀ ಸಾಮಾನ್ಯನ ಬದುಕಿನ ವೈಯಕ್ತಿಕ ಭಾವಗಳೂ ಕಾವ್ಯ ವಸ್ತುಗಳಾಗುವ ಸಾಧ್ಯತೆಯನ್ನು ಕಂಡರು. 'ನವೋದಯ ಕಾವ್ಯ ಪ್ರಯೋಗ' ಗಳ ಸಂದರ್ಭದಲ್ಲಿ ನಾವು ಗಮನಿಸಬೇಕಾದದ್ದು. ಸಂಪೂರ್ಣವಾಗಿ ಹೊಸದರ ಕಡೆಗೆ ವಾಲಿಕೊಳ್ಳದೆ ಪೂರ್ವಭಾರತೀಯ ಪರಂಪರೆ - ಚಾರಿತ್ರಿಕ ಪ್ರಜ್ಞೆ, ಸಂಸ್ಕೃತದ ಅಧ್ಯಯನ ಹಾಗೂ ಸಂಸ್ಕೃತ ಕವಿ-ಕಾವ್ಯಗಳ ಓದುವಿಕೆ, ಹಳೆಗನ್ನಡ ಕವಿಗಳ ಧರ್ಮ ನಿರಪೇಕ್ಷತೆ, ದೇಶಪ್ರೇಮ,

ಇತ್ಯಾದಿಗಳ ಸಂಪೂರ್ಣ ವಿವರಗಳೊಂದಿಗೆ ಪಾಶ್ಚಾತ್ಯರ ಪ್ರೇರಣೆಗೆ ಒಳಗಾದರು. 'ಹಂಸಕ್ಷೀರ' ನ್ಯಾಯವೋ ಎಂಬಂತೆ ಅಂದಿನ ಕಾಲಮಾನಕ್ಕೆ ಅಗತ್ಯವಾದ ಹೊಸತನ್ನು ಸ್ವೀಕರಿಸುತ್ತಾ ಭಾರತೀಯ ಪಾರಂಪಾರಿಕ ಪ್ರಜ್ಞೆಯೊಂದಿಗೆ ಸಾಹಿತ್ಯವನ್ನು ರಚಿಸಿದರು.

**೧:೧:೩ ಭಾರತೀಯ ಪ್ರಾಚೀನತೆ**

ಹೊಸತು ಎಂಬ ಅರಿವಿಗೆ ಪ್ರಾಚ್ಯ ಹಾಗೂ ಪಾಶ್ಚಾತ್ಯ ಸಾಹಿತ್ಯಾಧ್ಯಯನದ ಶ್ರಮ ಇತ್ತು. ಭಾರತೀಯ ವೇದ - ವೇದಾಂತಗಳು - ತತ್ತ್ವ ಶಾಸ್ತ್ರಗಳ ಕ್ರಮಭರಿತ ಅಧ್ಯಯನಾಸಕ್ತಿ ಹಾಗೂ ಶ್ರಮಗಳೆರೆಡೂ ನವೋದಯ ಕವಿಗಳ ಬೆನ್ನೆಲುಬಾಗಿತ್ತು. ಕನ್ನಡ ನಾಡಿನ ಎಲ್ಲ ನವೋದಯ ಕವಿಗಳ ಸಾಹಿತ್ಯ ಅಧ್ಯಯನಗಳ ಅವರ ವೈಯಕ್ತಿಕ ಹಾಗೂ ಸಾಹಿತ್ಯಕ ಬದುಕಿನಲ್ಲಿ ಪ್ರೇರಣೆಯಾದ ಕೆಲ ಅಂಶಗಳು ಸ್ಪಷ್ಟಗೊಳ್ಳುತ್ತವೆ. ರವೀಂದ್ರನಾಥ ಠಾಕೂರ್, ಶ್ರೀ ಅರವಿಂದರು, ಶ್ರೀಮಾತೆ, ರಾಮಕೃಷ್ಣಪರಮಹಂಸ, ವಿವೇಕಾನಂದ, ಗಾಂಧೀಜಿ, ಹೀಗೆ ಹಲವು ವಿಭೂತಿ ಪುರುಷರ ದರ್ಶನಗಳಿಂದ ಪ್ರಭಾವಿತರಾಗಿ ಅವರ ತತ್ತ್ವಗಳ ಹಿನ್ನೆಲೆಯೊಂದಿಗೆ ಪಾಶ್ಚಾತ್ಯರಿಂದ ಪಡೆದ ಆಂಶಿಕ ಪ್ರೇರಣೆಯೊಂದಿಗೆ, ತಮ್ಮ ಪರಿಸರದ ಹೊಸ ಬದುಕನ್ನು ಹೊಸ ರೂಪಗಳ ಮೂಲಕ ಅಭಿವ್ಯಕ್ತಿ ಪಡಿಸಲು ಮುಂದಾದರು. ವ್ಯಾಸ-ವಾಲ್ಮೀಕಿ, ಕಾಳಿದಾಸ ಮೊದಲಾದ ಸಂಸ್ಕೃತ ಕವಿ-ಕಾವ್ಯಗಳ ಪರಿಚಯದೊಂದಿಗೆ ಸಮಕಾಲೀನ ಕನ್ನಡ ನಾಡಿನ ಕವಿಗಳ ಅನುಭವಗಳ ತನಕ ಪ್ರಜ್ಞೆಯ ಅರಿವು ನವೋದಯ ಸಾಹಿತಿಗಳಿಗೆ ಇತ್ತು. ಹಿಂದಿನ ಪರಂಪರೆಯನ್ನು ಮೈಗೂಡಿಸಿಕೊಂಡು ಅವನ್ನು ಗೌರವದಿಂದ ಕಾಣುವುದು ಸಾಹಿತಿಗಳ ಜವಾಬ್ದಾರಿ ಎಂದೇ ಭಾವಿಸಿದರು. ತಾವು ಕೆಲಮಟ್ಟಿಗೆ ಪಾಶ್ಚಾತ್ಯ ಪ್ರೇರಣೆಗೆ ಒಳಗಾಗಿದ್ದರೂ ಭಾರತೀಯ ಪರಂಪರೆಯ ಕನ್ನಡನಾಡಿನ ನೆಲದಲ್ಲಿ ಬರೆಯುವುದರ ಖಚಿತತೆಯೊಂದಿಗೆ ಮುನ್ನಡೆದರು. ಸೃಜನಶೀಲ ಸಾಹಿತಿ ತನ್ನ ಅನುಭವವನ್ನು ತಾನು ನಿಂತ ನೆಲದಿಂದ ಬೆಳೆದುಕೊಳ್ಳದ ಹೊರತು, ಅದಕ್ಕೆ ಅಗತ್ಯವಾದ ಅಧ್ಯಯನದಲ್ಲಿ ತೊಡಗದ ಹೊರತು ಮೌಲಿಕವಾದದನ್ನು ನಿರ್ಮಿಸಲಾರರು ಎಂದು ನವೋದಯ ಕವಿಗಳು ಶ್ರುತಪಡಿಸಿದರು.

**೧.೨ ನವೋದಯ ಸಂದರ್ಭದ ಭಿನ್ನತೆ : ಶೈಲಿ**

ನವೋದಯ ಸಂದರ್ಭದಲ್ಲಿ ಕಾವ್ಯ ಪ್ರಕಾರ ಸಮೃದ್ಧವಾಗಿ ಬೆಳೆಯಿತು. ಚಾರಿತ್ರಿಕ ಮಹತ್ವವನ್ನು ಪಡೆದ ಬಿ.ಎಂ.ಶ್ರೀ. ಅವರ 'ಇಂಗ್ಲೀಷ್ ಗೀತೆ'ಗಳು ಅನೇಕ ಹೊಸ ಪ್ರಯೋಗಗಳಿಗೆ ದಾರಿದೀಪವಾಯಿತು. ಅನುವಾದಿತ ಕವನ ಸಂಕಲನವೇ ಆಗಿದ್ದರೂ ವಸ್ತು ವೈವಿಧ್ಯತೆ ಭಾರತೀಯತೆಯ ಗೇಯತೆ-ಛಂದಸ್ಸು-ಪ್ರಾಸಗಳ ಬಳಕೆಯಲ್ಲಿ ಹೊಸ ಪ್ರಯೋಗಗಳು, ಕನ್ನಡ ಕವಿಗಳ ಸೃಜನಶೀಲತೆಗೆ ಪೂರಕ ಪೋಷಕ ಅವಕಾಶಗಳನ್ನು ಪೂರೈಸಿತು. ಬಿ.ಎಂ.ಶ್ರೀ. ಅವರಿಗಿಂತಲೂ ಮುನ್ನವೇ ಕಾವ್ಯ ಕೃಷಿಯಲ್ಲಿ ತೊಡಗಿದ್ದ ಪಂಜೆಮಂಗೇಶರಾಯ ತಮ್ಮ, 'ನಾಗರಹಾವು' 'ಹುತ್ತರಿ ಹಾಡು' 'ತೆಂಕಣ ಗಾಳಿಯಾಟ' ಗಳಲ್ಲಿ ಹೊಸಲಯವನ್ನು ತುಂಬಿದರು. ಭಾವಗೀತೆಯ ಗೇಯತೆ ಈ ಹಂತದಲ್ಲೇ ಲಭ್ಯವಾಗತೊಡಗಿತು. ಮಾಸ್ತಿ ವೆಂಕಟೇಶ ಅಯ್ಯಂಗಾರರು 'ಶ್ರೀನಿವಾಸ' ಕಾವ್ಯನಾಮದಿಂದ ಕೃತಿ ರಚಿಸಿದರು. ದಾಸ ಸಾಹಿತ್ಯದ ಭಾವ ತುಂಬಿದ ಇತರೆ ಕವನಗಳು ಹಾಡಿಗೆ ಒಗ್ಗಿದವು. ಡಿ.ವಿ. ಗುಂಡಪ್ಪನವರ "ವನಸುಮದೊಳೆನ್ನ ಜೀವನವು ವಿಕಸಿಸುವಂತೆ" ಎಂಬ ಕವನ, ಗೋವಿಂದ ಪೈ ಅವರ ಆದಿಪ್ರಾಸ-ಅಂತ್ಯಪ್ರಾಸಗಳ ಕಾವ್ಯ ಪ್ರಯೋಗಗಳು ನವೋದಯ ಕಾವ್ಯಗಳಲ್ಲಿ ಹೊಸ ಚೇತನವನ್ನು ಮೂಡಿಸಿತು. "ಭಾವಗೀತೆಯಲ್ಲಿ ವಿಧ-ವಿಧವಾದ ಪ್ರಯೋಗಗಳು ನಡೆದವು. ಬೇಂದ್ರೆ, ಕುವೆಂಪು, ತೀನಂಶ್ರೀ, ಕೆ.ಎಸ್. ನರಸಿಂಹಸ್ವಾಮಿ ಮೊದಲಾದವರು ಹೆಣ್ಣು ಗಂಡಿನ ಒಲವನ್ನು ನಿರೂಪಿಸಲು

ಭಾವಗೀತೆಯನ್ನು ಬಳಸಿದರು. ಸಹಜವಾದ ಹೆಣ್ಣು, ಗಂಡಿನ ಅನುರಾಗದಿಂದ ಹಿಡಿದ ಚಿಂತನೆ, ಅನುಭಾವದವರೆಗೆ ಕವಿ ಚೇತನ ಬಾಳಿನ ನೂರು ಅನುಭವಗಳಿಗೆ ನೂರು ರೀತಿಯಲ್ಲಿ ಸ್ಪಂದಿಸಿದುದನ್ನು ಈ ಕಾಲದ ಭಾವಗೀತೆಗಳಲ್ಲಿ ಕಾಣಬಹುದು. ಇದು ಉತ್ಸಾಹದ ಕಾಲ, ಭಾವಗೀತೆಯ ಕಟ್ಟಡದಲ್ಲಿ ಹತ್ತಾರು ಪ್ರಯೋಗಗಳು ನಡೆದವು. ಅಷ್ಟ ಷಟ್ಪದಿ ರೂಪ ಅನೇಕರಿಗೆ ಪ್ರಿಯವಾಯಿತು." ೨

೧:೩ ವಸ್ತು ವೈವಿಧ್ಯತೆ

ನವೋದಯ ಕಾವ್ಯ ಮಾರ್ಗದ ಮೇಲ್ಪಂಕ್ತಿಯಲ್ಲಿ ಕಂಡುಬರುವ ಬಿ.ಎಂ. ಶ್ರೀಕಂಠಯ್ಯ, ಎಸ್.ವಿ. ರಂಗಣ್ಣ, ವಿ.ಕೃ. ಗೋಕಾಕ್, ಎ.ಎನ್. ಮೂರ್ತಿರಾಯ, ಗೋಪಾಲಕೃಷ್ಣ ಅಡಿಗ, ಎಸ್. ಅನಂತ ನಾರಾಯಣ ಇವರೆಲ್ಲಾ ಮೂಲತಃ ಇಂಗ್ಲೀಷ್ ಪ್ರಾಧ್ಯಾಪಕರು, ರೊಮ್ಯಾಂಟಿಕ್ ಕಾವ್ಯ ಪ್ರಭಾವಕ್ಕೆ ಸಹಜವಾಗಿ ಒಳಗಾದರು, ತಮ್ಮ ಕಾವ್ಯ ಕೃಷಿಯಲ್ಲಿ ಭಿನ್ನ ಭಿನ್ನ ವೈವಿಧ್ಯತೆಗಳಿಗೆ ಪಕ್ಕಾದರು. ಈ ಎಲ್ಲ ವೈವಿಧ್ಯತೆಗಳ ಆಯ್ಕೆಯಲ್ಲಿ ಅವರಿಗೆ ಪೂರಕ ಬೆಂಬಲವಾಗಿದ್ದು ಭಾರತೀಯತೆ, ಶುದ್ಧ ಭಾರತೀಯ ಮನಸ್ಸಿನಲ್ಲಿ ತಾವು ನಿಂತ ನೆಲದ ಅಂತಃಸತ್ವವನ್ನು ಹೀರಿಕೊಂಡು ಹೊಸತರ ಸೃಷ್ಟಿಗೆ ತೊಡಗಿದರು.

೧:೩:೧ ಪ್ರಕೃತಿ

ಪಾಶ್ಚಾತ್ಯ ಕವಿಗಳಲ್ಲಿನ ಪ್ರಕೃತಿ ಕುರಿತ ಕಾವ್ಯಾಸಕ್ತಿ ನವೋದಯ ಕವಿಗಳಿಗೆ ಹೊಸ ಸಾಧ್ಯತೆಗಳಿಗೆ ದಾರಿಯನ್ನು ತೋರಿತು. ಭಾರತೀಯರಿಗೆ ಪ್ರಕೃತಿ ಕೇವಲ ಬಹಿರಂಗವಾದದಲ್ಲ. ಅದು ಅಂತರಂಗದ ಚೈತನ್ಯದ ಆವಿರ್ಭಾವ ಸದಾ ಕಾಲವೂ ಪ್ರಕೃತಿ ಪೂಜನೀಯ ಲೋಕ ಜೀವನದ ವಿಷಮತೆಗಳಿಂದ ತಲ್ಲಣಗೊಂಡ ಮನಸ್ಸಿಗೆ ಪ್ರಕೃತಿ ಸಮಾಧಾನ ನೀಡುವ ಕಲ್ಪನೆ ಭಾರತೀಯರ ಪಾಲಿಗೆ ಹೊಸತೇನೂ ಅಲ್ಲ, ಆದರೆ ಪಾಶ್ಚಾತ್ಯದ ಪ್ರೇರಣೆ ಸುಪ್ತವಾಗಿ ಉಳಿದಿದ್ದ ಸಾಂಪ್ರದಾಯಿಕ ಪ್ರಜ್ಞೆಗೆ ಹೊಸ ಎಚ್ಚರವನ್ನು ಹುಟ್ಟಿಸಿತು. ಪ್ರಕೃತಿಯ ಸಾಹಚರ್ಯದಲ್ಲಿ ಬೆಳೆದುಬಂದ ಗುರುಕುಲ ಪದ್ಧತಿಯ ವಿದ್ಯಾಭ್ಯಾಸ-ಪ್ರಕೃತಿ ಪೂಜೆ, ಪಂಚಭೂತಗಳ ಪರಿಕಲ್ಪನೆ, ನೀರನ್ನು ದೇವಿ ಎಂದು ಪೂಜಿಸುವ ದೈವಿಕತೆಗಳು, ಭಾರತೀಯ ಪರಂಪರೆಯ ಸಾಂಪ್ರದಾಯಿಕ ಮೌಲ್ಯಗಳಾಗಿವೆ. ಪ್ರಕೃತಿಯ ಕುರಿತಾದ ಈ ಕಾಳಜಿ ತಮ್ಮ ಉಳಿಯುವಿಕೆಯಲ್ಲಿ ಮಹತ್ವದ್ದಾಗಿದ್ದು ನವೋದಯ ಸಾಹಿತ್ಯ ಸಂದರ್ಭದಲ್ಲಿಯೇ. ಹೊಸಗನ್ನಡಕ್ಕೆ ಪೂರ್ವದಲ್ಲಿ ಕವಿಗಳು ಮತ ಧರ್ಮಗಳಿಗೆ ಕಾವ್ಯದಲ್ಲಿ ಹೆಚ್ಚು ಪ್ರಾಶಸ್ತ್ಯ ನೀಡಿದರು. ನವೋದಯದ ಕವಿಗಳು ಮತಧರ್ಮದ ಬದಲಾಗಿ ಪ್ರಕೃತಿಯನ್ನು ವಸ್ತುವಾಗಿ ಸ್ಥಾಪಿಸಿದರು. ಪ್ರಕೃತಿಯು ಆನುಷಂಗಿಕವಾಗಿ ಕವಿ ಕೃತಿಯಲ್ಲಿರುತ್ತಿದ್ದುದು ಇದೀಗ ಕೇಂದ್ರ ಬಿಂದುವಾಯಿತು. ತಾನೇ ಕಾವ್ಯವಾಯಿತು. ಇದೇ ಸಂದರ್ಭಕ್ಕೆ ಕಾವ್ಯದ ದೀರ್ಘತೆ ಕಡಿಮೆಯಾಯಿತು.

ಬೇಂದ್ರೆ ಕಾವ್ಯ ಸ್ಫೂರ್ತಿಗೆ ಒಂದು 'ಹೂತ ಹುಣಸಿಮರ ಸಾಕು' ಎಂದವರು ಪ್ರಕೃತಿ ವೈಭವವನ್ನು ಪುನರಪಿ ಮೆರೆಯುವಲ್ಲಿ ಬೇಂದ್ರೆಗೆ ಕಿಂಚಿತ್ತೂ ಬೇಸರವಿಲ್ಲ. ಶ್ರಾವಣ ಕವಿ ಎಂದೇ ಹೆಸರಾದ ಬೇಂದ್ರೆ, ಶ್ರಾವಣದ ವೈಭವ, ಬಂಧಿಕಾರ ಶ್ರಾವಣ, ಮತ್ತೆ ಶ್ರಾವಣ, ಯುಗಾದಿ ಎಂದು ಬಗೆ ಬಗೆಯಾಗಿ ಹಾಡುತ್ತಾರೆ. ಕುವೆಂಪುರವರು ಆನಂದಮಯ ಈ ಜಗಹೃದಯಾ, ಹೂವು-ದೇವರು ಪ್ರಕೃತಿ, ಉಪಾಸನೆ ಲತಾನಟಿ, ಹಸುರು ಪೂಜೆ, ವೈಶಾಖ ಪಾಡ್ಯಮಿ ಇತ್ಯಾದಿಗಳಲ್ಲಿ ನಿಸರ್ಗ ಪ್ರೀತಿಯನ್ನು ಕಟ್ಟಿ ತೋರಿಸಿದ್ದಾರೆ. ಮೈಸೂರು ಮಲ್ಲಿಗೆಯ ಕವಿ ಕೆ.ಎಸ್.ನರಸಿಂಹಸ್ವಾಮಿಗೆ ಮಲ್ಲಿಗೆಯೇ ಮೊದಲ ಆದ್ಯತೆ.

ಪುತಿನ ಅವರ ಪ್ರಕೃತಿ ಪ್ರೇಮ, ಒಂದು ಸಂಜೆ, ಬಾನ್ ತಿಳಿದಿತ್ತು, ಯದುಗಿರಿಯ ಮೌನವಿಕಾಸ ಶಾರದ

ಯಾಮಿನಿ ಕವಿತೆಗಳಲ್ಲಿ ಹೊರ ಹೊಮ್ಮಿದೆ. ಸಮಾಧಾನ, ಮಡಿಕೇರಿಲಿ ಮಂಜು ಜಿ.ಪಿ. ರಾಜರತ್ನಂ ಅವರ ನಿಸರ್ಗ ಪ್ರೀತಿಗೆ ಸಾಕ್ಷಿಯಾಗಿದೆ. ಜಿ.ಎಸ್.ಎಸ್. ಅವರ ಬಯಲು, ಮಲ್ಲಿಗೆ, ಅಲೆಗಳು, ಗೆಲುವು, ಚೈತ್ರ, ಪರಮೇಶ್ವರ ಭಟ್ಟರ ಮತ್ತುಗದ ಮರ, ಕಣವಿ ಅವರ 'ಸೃಷ್ಟಿ ನೋಂತು ನಿಂತಿದೆ' 'ನಿಯಮಲ್ಲೋಂಘನಗಳು' ನವೋದಯ ಸಂದರ್ಭದ ಪ್ರಕೃತಿ ಗೀತೆಗಳಿಗೆ ಸಾಕ್ಷಿಯಾಗಿವೆ.

### ೧:೩೧:೧ ಪ್ರಕೃತಿ ಮತ್ತು ದೈವತ್ವ

ಬೇಂದ್ರೆ ಅವರ ಬೆಳಗು - ಪ್ರಕೃತಿ ವರ್ಣನೆ ಕೊನೆಯ ಘಟ್ಟದಲ್ಲಿ ಆದ್ಯಾತ್ಮದತ್ತ ತಿರುಗುವುದು. ಇದು ಬರೀ ಬೆಳಗಲ್ಲೋ ಅಣ್ಣಾ! ಎಂಬ ಉದ್ಗಾರ - ಪ್ರಕೃತಿ - ದೈವತ್ವದ ಸಂಕೇತವಾಗಿ ಕಂಡಿದೆ. ಕುವೆಂಪು ಅವರ 'ದೇವರು ರುಜು ಮಾಡಿದನು' ಕಾವ್ಯವು ಇದೇ ದಾಟಿಯಲ್ಲಿ ಸಾಗುತ್ತದೆ. ಕುವೆಂಪು ಅವರ ಬೃಹತ್ ಕಾದಂಬರಿಗಳಾದ ಕಾನೂರುಸುಬ್ಬಮ್ಮಹೆಗ್ಗಡತಿ, ಮಲೆಗಳಲ್ಲಿ, ಮದುಮಗಳುಗಳಲ್ಲಿ ಪ್ರಕೃತಿ ವರ್ಣನೆ ಅಸದಳವಾಗಿದೆ. ಶ್ರೀರಾಮಾಯಣ ದರ್ಶನಂ ಮಹಾಕಾವ್ಯಗಳಲ್ಲಿ ಪ್ರಕೃತಿ ವರ್ಣನೆಯು ಆದ್ಯಾತ್ಮದತ್ತ ಕೊನೆಗೊಳ್ಳುತ್ತದೆ. ಪುತಿನ ಅವರ 'ನೆರಳು' ಇದೇ ದಾಟಿಯಲ್ಲಿದೆ. ಮೇಲೊಂದು ಗರುಡ ಹಾರುತಿದೆ, ಕೆಳಗದರ ನೆರಳು ಓಡುತಿಹದು, ಎಂದು ಪ್ರಾರಂಭವಾದ ಕವಿತೆ, ಇದನೋಡಿ ನಾನು ನೆನೆದ ನಿಂದು... ಹರಿದತ್ತ ಹರಿಯ ಚಿತ್ತ ಈ ಧೀರ ನೆಡೆವನೆತ್ತ ಎಂಬ ಶ್ರೀ ವೈಷ್ಣವ ಪ್ರಜ್ಞೆಯಲ್ಲಿ ಕೊನೆಗೊಳ್ಳುತ್ತದೆ. ಪುತಿನ ಅವರು ಜಗತ್ತಿನ ಚೆಲುವನ್ನು ಆಸ್ವಾದಿಸುವುದು ಭಗವಂತನ ಕರುಣೆಯಿಂದಲೇ ಎನ್ನುತ್ತಾರೆ.

ಮಧುರ ಚೆನ್ನ-ನವೋದಯ ಸಂದರ್ಭದಲ್ಲಿ ಬೇಂದ್ರೆ ಸಮಕಾಲೀನರಾಗಿ ಕಂಡುಬರುವ ಪ್ರಮುಖರು. ನನ್ನನಲ್ಲ ಹಾಗೂ ದೇವತಾ ಪ್ರಥುವಿ ಕಾವ್ಯಗಳಲ್ಲಿ ಭೂತಾಯಿಯಿಂದ ಆಧ್ಯಾತ್ಮದತ್ತ ಸಾಗುವ ಪ್ರಕ್ರಿಯೆ ಇದೆ.

ಪ್ರಕೃತಿಯಲ್ಲಿ ದೈವತ್ವವನ್ನು ಅಂಗೀಕರಿಸಿದ ನಮ್ಮ ಸಾಹಿತಿಗಳು ಕಾವ್ಯದಲ್ಲಿ ನಿಸರ್ಗ ವೈಭವವನ್ನು ತರುತ್ತಾ ದೈವೀ ಭಾವಕ್ಕೆ ಐಕ್ಯಗೊಳಿಸಿದರು.

### ೧:೩.೨ ಅನುಭಾವಿಕತೆ

ನವೋದಯ ಕಾವ್ಯ ಮಾರ್ಗದಲ್ಲಿ 'ಅನುಭಾವಿಕತೆ' ಪ್ರಧಾನ ಲಕ್ಷಣವಾಗಿ ಕಂಡುಬರುತ್ತದೆ. ನವೋದಯ ಸಾಹಿತ್ಯದ ಎರಡು ಲಕ್ಷಣಗಳು ಗಮನಾರ್ಹ. ಇವು ಒಂದಕ್ಕೊಂದು ಪೂರಕ. ಮೊದಲನೆಯದು ಇದರಲ್ಲಿ ಬಾಳು ಸ್ವೀಕಾರಾರ್ಹ ಎಂಬ ನಂಬಿಕೆಯ ಮತ್ತು ಮೌಲ್ಯಗಳ ಸ್ವೀಕಾರ. ಎರಡನೆಯದು ಇದರ ಆಧ್ಯಾತ್ಮಿಕತೆ. ನವೋದಯ ಸಾಹಿತ್ಯದ ಮೇರು ಪ್ರತಿಭೆಗಳೆಂದೇ ಗುರುತಿಸಲ್ಪಟ್ಟ ಕುವೆಂಪು, ಬೇಂದ್ರೆ ಹಾಗೂ ಪುತಿನ ಅವರ ಕಾವ್ಯಗಳಲ್ಲಿ ಅನುಭಾವಿಕತೆ ಹೆಚ್ಚು ಸ್ಪಷ್ಟವಾಗಿಕಾಣಿಸಿಕೊಂಡಿದೆ. ಶ್ರೀನಿವಾಸ (ಮಾಸ್ತಿ) ಅವರ ಕಾವ್ಯಗಳಲ್ಲೂ ಆಧ್ಯಾತ್ಮಿಕತೆ ದಟ್ಟವಾಗಿದೆ. 'ಚಾರಿತ್ರಿಕ ಪ್ರಜ್ಞೆ'ಯುಳ್ಳ ನವೋದಯ ಲೇಖಕರು ಅನೇಕ ವಿಭೂತಿ ಪುರುಷರಿಂದ ಗಾಢ ಪ್ರಭಾವಕ್ಕೆ ಒಳಗಾದರು. ಶ್ರೀ ಅರವಿಂದರು, ಶ್ರೀಮಾತೆ, ರವೀಂದ್ರನಾಥ ಠಾಕೂರ್, ಶ್ರೀರಾಮಕೃಷ್ಣ ಪರಮಹಂಸ, ಗಾಂಧೀಜಿ, ವಿವೇಕಾನಂದ ಇವರೆಲ್ಲಾ ತಮ್ಮ ಬದುಕಿನಿಂದ ಭಾರತೀಯ ಮನಸ್ಸುಗಳಿಗೆ ಸಾಧಕರಾದವರು. ನವೋದಯ ಸಾಹಿತ್ಯದ ಸಂದರ್ಭದಲ್ಲಿ ಶ್ರೀ ರಾಮಕೃಷ್ಣ ಪರಮಹಂಸ, ವಿವೇಕಾನಂದ ಹಾಗೂ ಗೌತಮ ಬುದ್ಧರ ಜೀವನ ಚರಿತ್ರೆಗಳು, ಕತೆಗಳು, ಕಿರುಗತೆಗಳು ಹೆಚ್ಚಿನ ಸಂಖ್ಯೆಯಲ್ಲಿ ಸೃಷ್ಟಿಯಾದವು ಎನ್ನುವುದು ಇಲ್ಲಿ ಗಮನಾರ್ಹವಾಗಿದೆ. ನವೋದಯದ ಕವಿಗಳಲ್ಲಿ, ವಿಶಿಷ್ಟರಾದ ಮಧುರ ಚೆನ್ನರ 'ಶ್ರೀ

ವಿವೇಕಾನಂದ' 'ಬೇಂದ್ರೆ ಅವರ ಶ್ರೀ ಅರವಿಂದರಿಗೆ' 'ರವೀಂದ್ರರಿಗೆ ಜಯ ಜಯ ಗಾಂಧೀ ಮೋಹನಾ' ಕುವೆಂಪುರ 'ಶ್ರೀ ಗುರು' 'ಮಹಾಮಾತೆ' 'ಗುರುದೇವನಿಗೆ' ಸ್ವಾಮಿ ವಿವೇಕಾನಂದ, ಜಿ.ಎಸ್. ಶಿವರುದ್ರಪ್ಪ ಅವರ 'ಕವಿ ರವೀಂದ್ರರನ್ನು ಕುರಿತು' 'ಬಸವಣ್ಣನವರಿಗೆ' 'ಶ್ರೀ ವಿವೇಕಾನಂದ ಪುರುಷ ಸೂಕ್ತ' ಇತ್ಯಾದಿಗಳು -ಸಾಧಕರ ಪ್ರಭಾವ ಹಾಗೂ ಸಾರ್ಥಕತೆಯನ್ನು ಸೂಚಿಸುತ್ತದೆ.

೧:೩:೩ ಪ್ರೇಮ

ಗಂಡು-ಹೆಣ್ಣಿನ ನಡುವಿನ ಸಂಬಂಧಗಳು ಈ ಕಾಲ ಘಟ್ಟದಲ್ಲಿ ವಿಶಿಷ್ಟ ಪೂರ್ಣವಾಗಿ ಕಾಣಿಸಿಕೊಂಡಿದೆ. ನವ ವಿವಾಹಿತರ ಪ್ರೇಮ ದಾಂಪತ್ಯ ಸಂಬಂಧಿ ಪ್ರೇಮಗಳು ನವೋದಯ ಕಾವ್ಯಗಳಲ್ಲಿ ಪರಿಪಕ್ವವಾಗಿ ಕಂಡುಬರುತ್ತದೆ. ನೈತಿಕ ಚೌಕಟ್ಟಿನೊಳಗೆ ಆದರ್ಶಭರಿತವಾದ ಪ್ರೇಮ ಸಂಬಂಧಗಳು ಅರಳಿಕೊಂಡವು

ತೀನಂಶ್ರೀ ಅವರ 'ಒಲುಮೆ' ನವೋದಯ ಕನ್ನಡ ಸಾಹಿತ್ಯದ ಪ್ರೇಮಕವನಗಳ ಪ್ರಥಮ ಸಂಕಲನ.

ಕುವೆಂಪು ಅವರ 'ದಾಂಪತ್ಯ' ಪ್ರೇಮ ರಸ ಕಾವ್ಯಗಳಾಗಿ ಮೂಡಿಬಂದಿವೆ. 'ಕೊಳಲು', 'ಚಂದ್ರ ಮಂಚಕೆ ಬಾ', 'ಚಕೋರಿ', 'ಪ್ರಿಯ ಕಾಶ್ಮೀರ', 'ಚಿತ್ರಾಂಗದಾ' ಕವನ ಸಂಕಲಗಳಲ್ಲಿನ ಕವನಗಳು ಅವರ ಆದರ್ಶ ದಾಂಪತ್ಯ ಪ್ರೇಮಕ್ಕೆ ಸಾಕ್ಷಿಯಾಗಿದೆ.

ಪ್ರೇಮ ಕವಿಯೆಂದೇ ಪ್ರಸಿದ್ಧಿಗೊಂಡ ಕೆ.ಎಸ್. ನರಸಿಂಹಸ್ವಾಮಿ ಹೆಣ್ಣಿನಲ್ಲಿ ಪ್ರೇಮ ವಿವಾಹಿತ ದಂಪತಿಗಳ ನಡುವಿನ ವಿವಿಧ ಸ್ವರೂಪಗಳ [ನಾಚಿಕೆ, ಮುನಿಸು ವಿರಹ] ಪ್ರೀತಿಯನ್ನು ಆಪ್ತವಾಗಿ ಕಾವ್ಯ ರೂಪದಲ್ಲಿ ಕಟ್ಟಿರಿಸಿದ್ದಾರೆ. ಇವರಿಗೆ ಪ್ರೇಮಗೀತೆಗಳ ಇತಿಹಾಸದಲ್ಲಿ ವಿಶಿಷ್ಟವಾದ ಸ್ಥಾನವಿದೆ. ಮೈಸೂರು ಮಲ್ಲಿಗೆಯ ಮಾರ್ದವತೆ ಅವರ ಪ್ರೇಮ ಕವನಗಳಲ್ಲಿ ಅಚ್ಚೊತ್ತಿವೆ.

ಪುತಿನ ಅವರ 'ಗಣೇಶ ದರ್ಶನ'ದ ಪ್ರತೀಕ್ಷೆ, ಅವನು ಅವಳು ಇತ್ಯಾದಿಗಳಲ್ಲಿ ಪ್ರೇಮದ ಕುರಿತು ವರ್ಣನೆ ಇದೆ.

ಚನ್ನವೀರ ಕಣವಿಯವರ 'ಮಧುಚಂದ್ರ, 'ಗೆ', ಜಿ.ಎಸ್. ಶಿವರುದ್ರಪ್ಪ ಅವರ 'ಪ್ರಣಯ'ದಲ್ಲೂ ಪ್ರೇಮದ ಸೋಗಡಿದೆ.

ಬೇಂದ್ರೆಯವರನ್ನು ನವೋದಯ ಸಂದರ್ಭದಲ್ಲಿ ಪ್ರೇಮ ವ್ಯಾಖ್ಯಾನ ಮಾಡಿದ ವಿಶೇಷ ಕವಿಯೆಂದೇ ಪರಿಗಣಿಸಬೇಕಾಗುತ್ತದೆ. 'ಹುಬ್ಬಳಿಯಾಂವ', 'ಪೋರ - ಪೋರಿ', 'ನಾನು ಬಡವಿ ಆತ ಬಡವ' ದಂತಹ ಕಾವ್ಯಗಳಲ್ಲಿ ವಿವಿಧ ಮಜಲಿನಲ್ಲಿ ವ್ಯಕ್ತಗೊಂಡ ಪ್ರೇಮ, ಸಖೀಗೀತದಲ್ಲಿ ಪರಿಪಕ್ವತೆಯನ್ನು ಪಡೆಯಿತು. ದಾಂಪತ್ಯ ಪ್ರೇಮ, ವಾತ್ಸಲ್ಯ ಪ್ರೇಮಗಳ ಹಲವು ಮುಖಗಳನ್ನು ತಮ್ಮ ಕಾವ್ಯದ ಚೌಕಟ್ಟಿನಲ್ಲಿ ತಂದಿದ್ದಾರೆ. ನೈತಿಕತೆಯನ್ನು ಮೀರದ, ಶಾರೀರಿಕ ಆಕರ್ಷಣೆಗೆ ಹೊರತಾದ ದೈವಿಕ ಪ್ರೇಮ ನವೋದಯ ಕಾವ್ಯಗಳಲ್ಲಿ ವೈಶಿಷ್ಟ್ಯಪೂರ್ಣವಾಗಿ ಕಂಡುಬಂದಿದೆ. ಪತಿ-ಪತ್ನಿಯರ ನಡುವಿನ ಪ್ರೇಮ ಈ ಹಂತದಲ್ಲಿ ದೈವೀಕರಣ ಹೊಂದಿರುವ ಅಂಶವನ್ನು ಕುವೆಂಪು, ಬೇಂದ್ರೆ, ಅವರಲ್ಲಿ ಗಮನಿಸಬಹುದಾಗಿದೆ. ಅಮೂರ್ತವಾದ ಒಲವಿನ ಕಡೆಗೆ ನವೋದಯ ಕವಿಗಳು ಆದ್ಯತೆ ನೀಡಿದ್ದಾರೆ.

೧:೩:೪ ಸಾಮಾಜಿಕತೆ

ನವೋದಯ ಕಾಲದ ಸಾಹಿತಿಗಳು ಮಾನವೀಯ ನಿಲುವುಗಳ ಹಿನ್ನೆಲೆಯಲ್ಲಿ ಸಾಮಾಜಿಕ ಕಾಳಜಿಯನ್ನು ತೋರಿದ್ದಾರೆ. ತನ್ನ ಸುತ್ತಲ ಸಮಾಜದ ದುಃಖ-ದಾರಿದ್ರ್ಯಗಳನ್ನು ಕಂಡು ಮರುಗುತ್ತಾರೆ. ಕ್ರೌರ್ಯ-

ಅನ್ಯಾಯಗಳು ಅವರ ಕಾವ್ಯಕ್ಕೆ ಪ್ರೇರಣೆಯಾದವು. ಕುವೆಂಪು ಅವರು ತಮ್ಮ ವೈವಿಧ್ಯಮಯ ಸಾಹಿತ್ಯ ಪ್ರಕಾರಗಳಲ್ಲಿ ಸಾಮಾಜಿಕ ಕಾಳಜಿಯ ಅಸಮಾನತೆಗಳ ವಿರುದ್ಧದ ಪ್ರತಿಭಟನೆಗಳನ್ನು ತೋರಿದ್ದಾರೆ. ನಾಟಕಗಳಾದ 'ಜಲಗಾರ', 'ಶೂದ್ರತಪಸ್ವಿ', 'ಬೆರಳ್ಗೆಕೊರಳ್', 'ಕಲ್ಕಿ', 'ಇಂದಿನ ದೇವರು', 'ನೇಗಿಲಯೋಗಿ'ಗಳು ಇವರ ಸಾಮಾಜಿಕ ಕಳಕಳಿಗೆ ಸಾಕ್ಷಿಯಾಗಿವೆ. 'ಪುಟ್ಟ ವಿಧವೆ', 'ಕುರುಡು ಕಾಂಚಾಣ', 'ಹೆಣದ ಹಿಂದೆ', 'ದರಿದ್ರನಾರಾಯಣ', 'ತುತ್ತಿನ ಚೀಲ', 'ಅನ್ನ ಬ್ರಹ್ಮ'ಮುಂತಾದವು ಬೇಂದ್ರೆ ಅವರ ಬಡತನ, ಹೆಣ್ಣಿನ ಶೋಷಿತ ವಿವರಗಳ ಕವಿತೆಗಳು.

೧:೩:೫ ನಾಡು ನುಡಿ ಪ್ರೇಮ

ಕನ್ನಡ ನವೋದಯ ಸಾಹಿತ್ಯ ಬೆಳೆದುಬಂದದ್ದು ಸ್ವಾತಂತ್ರ್ಯದ ಹೋರಾಟದ ತೀವ್ರ ಸ್ಥಿತಿಯಲ್ಲಿದ್ದಾಗ, ದೇಶದ ಮುಕ್ತಿಯ ಹೊಣೆ ಪ್ರಜ್ಞಾವಂತ ಸಾಹಿತಿಗಳದ್ದಾಗಿತ್ತು ಬೇಂದ್ರೆ ಅವರ "ಮೂವತ್ತ ಮೂರು ಕೋಟಿ' 'ನರಬಲಿ', ಕುವೆಂಪು ಅವರ 'ಸಾಯುತಿದೆ ನಿಮ್ಮ ನುಡಿ', 'ಓ ಕನ್ನಡ ಕದರಿರ', 'ಕನ್ನಡ ಡಿಂಡಿಮ', 'ಅಖಂಡ ಕರ್ನಾಟಕ', 'ಕನ್ನಡ ಎನೆ ಕುಣಿದಾಡುವುದೆನ್ನೆದೆ', 'ಭಾರತ ಜನನಿಯ ತನುಜಾತೆ', ಗೋವಿಂದ ಪೈರವರ 'ಕನ್ನಡ ತಾಯಿ', ಶ್ರೀಯವರ 'ಕನ್ನಡ ತಾಯ್ ನೋಟ', 'ಕಾಣಿಕೆ', ಜಿ.ಪಿ. ರಾಜರತ್ನಂ ಅವರ 'ಕನ್ನಡ ಪದಗೋಳ್' ಇತ್ಯಾದಿಗಳಲ್ಲಿ ದೇಶ, ಭಾಷೆ ನೆಲ - ಜಲಗಳ ಆಪ್ತ ಪ್ರೀತಿ ವ್ಯಕ್ತಗೊಂಡಿದೆ.

೧:೪ ಭಾಷೆ

ಕನ್ನಡ ಭಾಷೆ ನಾನಾ ಘಟ್ಟಗಳಲ್ಲಿ ಪರಿವರ್ತನೆಗೆ ತನ್ನನ್ನು ಒಪ್ಪಿಕೊಂಡಿದೆ. ಹೊಸಗನ್ನಡದ ಸಂದರ್ಭದಲ್ಲಿ ಸಾಹಿತ್ಯದ ಭಾಷೆ ಮತ್ತಷ್ಟು ಸರಳಗೊಂಡಿತು. ಶ್ರೀ ಸಾಮಾನ್ಯನ ಭಾಷೆಯನ್ನು ಅನುಸರಿಸಿ ಸಾಹಿತ್ಯ ಕಟ್ಟುವ ಕೆಲಸ ಕಾರ್ಯಪ್ರವೃತ್ತವಾಯಿತು. ಬೇಂದ್ರೆ, ಮಧುರಚೆನ್ನ, ರಾಜರತ್ನಂರೆಲ್ಲಾ ಸರಳತೆಯ ಕಡೆಗೆ ಅದರಲ್ಲೂ ಜಾನಪದ ಧಾಟಿಗೆ ಒಳಗಾದರು. ಅಪವಾದವೆಂಬಂತೆ ಕುವೆಂಪು ಸಂಸ್ಕೃತ ಭೂಯಿಷ್ಠ ಗತ್ತಿಗೆ ಒಳಗಾಗಿರುವುದು ಗಮನಾರ್ಹ. ಉತ್ತರ ಕರ್ನಾಟಕದ ಪ್ರಾದೇಶಿಕತೆ ಹಾಗೂ ಜಾನಪದ ಸೊಗಡು ಬೇಂದ್ರೆ, ಮಧುರ ಚೆನ್ನರ ಕಾವ್ಯಗಳಲ್ಲಿ ಕಂಡು ಬಂದ ಹಾಗೆ, ಜಿ.ಪಿ. ರಾಜರತ್ನಂ, ಡಿ.ವಿ.ಜಿ. ಮೈಸೂರು ಪ್ರಾಂತ್ಯದ ಜಾನಪದ ಸೊಗಡನ್ನು ಆಯ್ಕೆ ಮಾಡಿಕೊಂಡರು. ಜನಸಾಮಾನ್ಯರ ಭಾಷೆ ಸಾಹಿತ್ಯ ಕ್ಷೇತ್ರಕ್ಕೆ ಪ್ರಚಲಿತಗೊಂಡಿತು.

ನವೋದಯ ಕಾಲ ಘಟ್ಟವು ವಸ್ತು, ಭಾಷೆ, ಶೈಲಿ ಪ್ರಕಾರ ಹಾಗೂ ವಿವರಗಳಲ್ಲಿ ತನ್ನ ಹಿಂದಿನ ಸಾಹಿತ್ಯ ಪ್ರಕಾರಗಳಿಂದ ಭಿನ್ನವಾಗಿ ಬೆಳೆಯಿತು. ಹೊಸಗನ್ನಡದ ಸಂದರ್ಭಕ್ಕೆ ನವೋದಯ ಸಾಹಿತ್ಯ ಅದರಲ್ಲೂ ಕಾವ್ಯ ಪ್ರಕಾರ ವೈವಿಧ್ಯತೆಯನ್ನು ಕಾಯ್ದುಕೊಂಡಿದೆ.

## ಅಡಿ ಟಿಪ್ಪಣಿ

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧. ಶಿವರುದ್ರಪ್ಪ ಜಿ.ಎಸ್. | ನವೋದಯ | ನೆಲಮನೆ ಪ್ರಕಾಶನ, ಕೆ.ಜಿ. ಕೊಪ್ಪಲ್, ಮೈಸೂರು ೧೯೮೧ (ಪು.೧) |
| ೨. (ಸಂ) ಗಿರಡ್ಡಿ ಗೋವಿಂದರಾಜ | ಕನ್ನಡ ನವೋದಯ ಕಾವ್ಯ | ಮಂಗಳೂರು ಕೇಂದ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೨೦೦೧ (ಪು.೮೫) |

ಅಧ್ಯಾಯ ೨

# ಬೇಂದ್ರೆಯವರ ಬದುಕು ಮತ್ತು ಸಾಧನೆ

ಹೊಸಗನ್ನಡ ಸಾಹಿತ್ಯ ಸಂದರ್ಭ ಕನ್ನಡಕ್ಕೆ ಮಾತ್ರವಲ್ಲ ಅಖಂಡ ಭಾರತಕ್ಕೆ ಪುನರುಜ್ಜೀವನದ ಕಾಲ. ಸಾಹಿತಿಗಳು ಹಳೆಗನ್ನಡದ ಸಂಪ್ರದಾಯಸ್ಥ ಪರಂಪರೆಯನ್ನು ನಿಧಾನವಾಗಿ ಕಳಚಿಕೊಂಡು ಹೊಸ ಅನುಭವಕ್ಕಾಗಿ ಕಾತರಿಸಿ, ಹೊಸತನದಿಂದ ಕಾವ್ಯವನ್ನು ಆರಂಭಿಸಿದರು. ವಚನ, ಕೀರ್ತನೆ, ಎಲ್ಲಕ್ಕೂ ಮಿಗಿಲಾಗಿ ಜಾನಪದದ ಭಾವಗೀತಾತ್ಮಕ ಧಾಟಿ, ಆಂಗ್ಲ ಸಾಹಿತ್ಯದ ಓದು ಅಂದಿನ ತರುಣ ಸಾಹಿತಿಗಳ ಮೇಲೆ ಸಾಕಷ್ಟು ಪರಿಣಾಮವನ್ನು ಬೀರಿತು. ಕಾಲಕ್ಕನುಗುಣವಾಗಿ ಹಳೆಯದರೊಂದಿಗೆ ಅಲ್ಪ-ಸ್ವಲ್ಪ ಬದಲಾವಣೆಯನ್ನು ತಮ್ಮ ಅನುಭವಗಳೊಂದಿಗೆ ಹೊರತರಲು ಯತ್ನಿಸಿದರು. ಪ್ರಾಸಗಳ ಕೈ ಬಿಡುವಿಕೆ, ದೀರ್ಘವರ್ಣನೆ ಇತ್ಯಾದಿಗಳಲ್ಲಿ ಗಣನೀಯವಾದ ಬದಲಾವಣೆಯನ್ನು ತಂದರು. ಸಾಮಾಜಿಕ ವಿಷಯಗಳು ಅವರ ಕಾವ್ಯಗಳಿಗೆ ವಸ್ತುಗಳಾದವು. ಪಂಜೆಮಂಗೇಶರಾಯ, ಹಟ್ಟಿಯಂಗಡಿ ನಾರಾಯಣರಾಯ, ಎಸ್.ಜಿ. ನರಸಿಂಹಾಚಾರ್ ಇವರೆಲ್ಲಾ ಹೊಸಗನ್ನಡದಲ್ಲಿ ಸುಧಾರಿತ ಶೈಲಿಯ ಕಾವ್ಯಗಳ್ನು ರಚಿಸಿದರು. ನಂತರದಲ್ಲಿ ಎಂ. ಗೋವಿಂದಪೈ, ಬಿ.ಎಂ. ಶ್ರೀಯವರು ನವೋದಯ ಕಾವ್ಯ ಸಂಪ್ರದಾಯಕ್ಕೆ ಮುನ್ನುಡಿ ಬರೆಯುತ್ತಾ ಬಂದರು.

ಇಂಗ್ಲೀಷ್ ಸಾಹಿತ್ಯದ ಓದು, ಆಧುನಿಕ ಶಿಕ್ಷಣ, ಪಾಶ್ಚಾತ್ಯ ಸಂಸ್ಕೃತಿ ಹಾಗೂ ನವ್ಯ ಸಾಹಿತ್ಯ ಸಂಸ್ಕೃತಿಗಳ ಮುಖಾ-ಮುಖಿ ಅಂದಿನ ತರುಣ ಪೀಳಿಗೆಯಲ್ಲಿ ಹೊಸ ಎಚ್ಚರವನ್ನು ಮೂಡಿಸಿತು. ಅಖಂಡ ಕರ್ನಾಟಕದಲ್ಲಿ ಮಂಗಳೂರು, ಧಾರವಾಡ, ಮೈಸೂರು ಪ್ರದೇಶಗಳಲ್ಲಿ ಏಕ ಕಾಲಕ್ಕೆ ನವೋದಯ ಪರಂಪರೆ ಪ್ರಚಾರ ಪಡೆಯಿತು. "ಧಾರವಾಡದಲ್ಲಿ ಗೆಳೆಯರ ಬಳಗವು ಐರಿಷ್ ಕವಿ ಎ.ಇ., ಜಾರ್ಜ್ ರಸೆಲ್ ಅವರ ಕೃತಿಗಳಿಂದ ಪ್ರೇರಿತರಾಗಿ, ಬೇಂದ್ರೆ, ಮಧುರಚೆನ್ನ, ಆನಂದಕಂದ, ಮುಗುಳಿ, ಗೋಕಾಕ್ ಅವರ ಮುಖಾಂತರ ಮುಂದಾದರೆ, ಮೈಸೂರಿನಲ್ಲಿ ಮಾಸ್ತಿ, ಕುವೆಂಪು, ಪುತಿನ, ರಾಜರತ್ನಂ, ಕೆ.ಎಸ್. ನರಸಿಂಹಸ್ವಾಮಿ ಸಾಹಿತ್ಯ ಕೃತಿಯಲ್ಲಿ ತೊಡಗಿದರು. ದಕ್ಷಿಣ ಕನ್ನಡದಲ್ಲಿ ಪಂಜೆ ಮಂಗೇಶರಾಯ, ಗೋವಿಂದಪೈ, ಕಡಂಗೋಡ್ಲು ಶಂಕರಭಟ್ಟ, ಎಂ.ಎನ್. ಕಾಮತ್, ಪೇಜಾವರ ಸದಾಶಿವ ರಾಯ ಮೊದಲಾದವರು ಕನ್ನಡದಲ್ಲಿ ನವೋದಯ ಪರಂಪರೆಯ ನಿರ್ಮಾಣಕ್ಕೆ ಕಾರಣರಾದರು." ೧

ಇಂಗ್ಲೀಷ್ ಕವಿಗಳಾದ ವರ್ಡ್ಸ್‌ವರ್ತ್, ಕೋಲ್‌ರಿಜ್, ಕೀಡ್ಸ್, ಷೆಲ್ಲಿ ಮೊದಲಾದವರ ಪ್ರಭಾವಕ್ಕೆ ಒಳಗಾದ ಕನ್ನಡ ಸಾಹಿತಿಗಳು, ಕಾವ್ಯಕ್ಕೆ ಯಾವ ವಸ್ತುವಾದರೂ ಆಗಬಹುದೆಂಬ ವಿಶಾಲ ದೃಷ್ಟಿ, ನಿಸರ್ಗ ಪ್ರೀತಿ, ಪ್ರಕೃತಿಯಾರಾಧನೆಯಲ್ಲಿ ತಾದಾತ್ಮ್ಯ, ಪ್ರಣಯ, ಆಧ್ಯಾತ್ಮ, ರಾಷ್ಟ್ರೀಯತೆ, ಸಾಮಾಜಿಕ ಪರಿವರ್ತನೆ ಇತ್ಯಾದಿಗಳ ಕಡೆ ಗಮನ ಹರಿಸಿದರು. ಈ ನಿಟ್ಟಿನಲ್ಲಿ ಬೇಂದ್ರೆಯವರು ನವೋದಯ ಘಟ್ಟದ ಮೇರು ಕವಿ ಎಂದೇ ಪರಿಗಣಿತರಾಗಿದ್ದಾರೆ.

### ೨:೧ ಬೇಂದ್ರೆ -ಹುಟ್ಟು-ವಿದ್ಯಾಭ್ಯಾಸ

ದತ್ತಾತ್ರೇಯ ರಾಮಚಂದ್ರ ಬೇಂದ್ರೆ ಎಂಬ ಹೆಸರಿನ 'ಬೇಂದ್ರೆ' ತಮ್ಮ ಮಾತೃ ತತ್ತ್ವದ ನಂಬಿಕೆಯಿಂದ 'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಿಂದ ಪ್ರಸಿದ್ದರು. ಇವರು ೧೮೯೬ ನೇ ಜನವರಿ ೩೧ ರಂದು ಧಾರವಾಡದ ಮಂಗಳವಾರ ಪೇಟೆಯ ಪೋತ್ನಿಸರ ಓಣಿಯ ಗುಣಾರಿ ಅವರ ಮನೆಯಲ್ಲಿ ಜನಿಸಿದರು.

'ಬೇನ್‌ರೆ' ಎಂದರೆ ದೇವಾಲಯಗಳಲ್ಲಿ ಋಕ್ ಮಂತ್ರಗಳನ್ನು ಪಠಿಸುವವರು ಎಂದರ್ಥ. ಬೇನ್‌ರೆ, ಬೇಂದ್ರೆ ಆಯಿತು. ಬೇಂದ್ರೆಯವರ ತಾತ ವೈದಿಕರು - ಬಡತನವಿದ್ದರೂ ಸಂಸ್ಕೃತಿಯಿಂದ ಶ್ರೀಮಂತರಾಗಿದ್ದವರು. ಅನೇಕ ಶಾಸ್ತ್ರ ಗ್ರಂಥಗಳನ್ನೂ ಸಂಗ್ರಹಿಸಿದ್ದೇ ಅಲ್ಲದೆ ಪಾರ್ವತೀಪರಿಣಯ, ಯಾಜ್ಞಿಕ ಧರ್ಮ ಪಂಡಿತರು, ದಶಗ್ರಂಥಿ, ಛಂದೋಹರಣ ಪ್ರತಿಗಳನ್ನು ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಅಜ್ಜಿಗೋದುಬಾಯಿ ವೈಧಿಕ ಸಂಸ್ಕೃತಿಯ ಮಡಿಯನ್ನು ಕಟ್ಟುನಿಟ್ಟಾಗಿ ಆಚರಿಸುತ್ತಿದ್ದವರು. ಬೇಂದ್ರೆಯವರ ತಂದೆ ರಾಮಚಂದ್ರ ಪಂಡಿತರು. ತಾಯಿ ಅಂಬಿಕೆ. ತಂದೆಯವರನ್ನು ಚಿಕ್ಕ ವಯಸ್ಸಿನಲ್ಲೇ ಕಳೆದುಕೊಂಡ ಬೇಂದ್ರೆ ಚಿಕ್ಕಪ್ಪನವರಾದ ಬಂಡೋ ಪಂತರ ಆಶ್ರಮದಲ್ಲಿ ಮೆಟ್ರಿಕ್ ಶಿಕ್ಷಣವನ್ನು ಮುಗಿಸಿದರು.

ತಾಯಿ ಅಂಬೂತಾಯಿ ೧೯೨೪ ರಲ್ಲಿ ತೀರಿಕೊಂಡರು. ಪ್ರಾಥಮಿಕ ಹಂತದ ವಿದ್ಯಾಭ್ಯಾಸ ಧಾರವಾಡದ ಕಾಮನ ಕಟ್ಟೆಯಲ್ಲಿ ನಡೆಯಿತು. ಕಾಮನಕಟ್ಟೆಯಲ್ಲಿನ ಬಾಲ್ಯದ ಸಂತೋಷದ ದಿನಗಳನ್ನು ಕಾವ್ಯ ಮುಖೇನ 'ಮತ್ತೆ ಬಂತು ಶ್ರಾವಣ' ದಲ್ಲಿ ವರ್ಣಿಸಿದ್ದಾರೆ ಬೆಳೆಯುವ ಸಿರಿ ಮೊಳಕೆಯಲ್ಲಿ ಎಂಬಂತೆ ಬೇಂದ್ರೆಯ ಸಾಹಿತ್ಯಾಸಕ್ತ ಬದುಕು - ಬಾಲ್ಯದ ಪ್ರಭಾವದಿಂದ ರೂಪುಗೊಂಡಿತು ಎನ್ನುವುದನ್ನು ಎನ್ಕೆ ಕುಲಕರ್ಣಿ ಹೀಗೆ ಹೇಳುತ್ತಾರೆ. "ಶಾಲಾ ಪಠ್ಯಗಳನ್ನು ಬಿಟ್ಟು ಇತರ ಪುಸ್ತಕಗಳನ್ನೋದುವ ಚಟವೂ ವಿಪರೀತ. ಪುಸ್ತಕ ವಚನ ತನಗೊಂದು ವ್ಯಸನವಾಗಿ ಬೆಳೆಯಿತೆಂದು ಮುಂದೆ ಅವರೇ ಹೇಳಿದ್ದಾರೆ. ಅವರು ವಾಸವಾಗಿದ್ದ ಕಾಮನ ಕಟ್ಟೆಯ ಮನೆಯ ಮಗ್ಗುಲಿಗೆ, 'ಭಾರತ ಪುಸ್ತಕಾಲಯ' ಅಲ್ಲಿಯ ಪುಸ್ತಕಗಳನ್ನು ಕೈಗಡ ತಂದು ಮನೆಯಲ್ಲಿ ತನ್ನ ಹಾಸುಗೆಯೆ ದಿಂಬಿನ ಸುತ್ತಲೂ ಹರವಿಕೊಂಡು ಈ ಶಾಲಾ ವಿದ್ಯಾರ್ಥಿ ಎಷ್ಟು ಓದುತ್ತಿದ್ದನೆಂದರೆ ಪುಸ್ತಕಗಳಲ್ಲಿ ಪುಸ್ತಕಗಳ ಮೇಲೆ ಹೊರಳಾಡಿಬಿಡುತ್ತಿದ್ದ" ೨ ಎಂದು ಬರೆದಿದ್ದಾರೆ. ಹೈಸ್ಕೂಲಿನಲ್ಲಿದ್ದಾಗ ಕಾಳಿದಾಸನ ಶಾಕುಂತಲ, ಭಟ್ಟನಾರಾಯಣನ ವೇಣಿ ಸಂಹಾರದ ಪಾತ್ರಧಾರಿಯಾಗಿ ಭಾಗವಹಿಸಿದ್ದರು. ಆ ನಾಟಕದ ಇಡೀ ಸಂಭಾಷಣೆ ಬಾಲಕ ದತ್ತನಿಗೆ ಬಾಯಿಪಾಠವಾಗಿತ್ತು. ಮನೆಯಲ್ಲಿ ನಡೆಯುತ್ತಿದ್ದ ಆದಿಶಂಕರರ ಸೌಂದರ್ಯಲಹರಿ ಉಪಾಸನೆ ಜೀವನದುದ್ದಕ್ಕೂ ಸಾಂತ್ವನ ಹೇಳುವ ಸಾಧನವಾಗಿತ್ತು.

"ಊರೊಳಗಿನ ವಿನೋಬ ದೇವರ ಗುಡಿ ದತ್ತಾತ್ರೇಯ ಗುಡಿಗಳಲ್ಲಿ ನಡೆಯುವ ಕೀರ್ತನ, ಪುರಾಣ, ಪ್ರವಚನಗಳು, ಶಿರಹಟ್ಟಿ ನಾಟಕ ಕಂಪನಿಯ ಪ್ರಯೋಗಗಳು, ಮರಾಠಿ ನಾಟಕಗಳ ಪ್ರಭಾವ, ನಾಟಕಕಾರ ಖಾಡೀಕರರ ಪರಿಚಯ, ಗಡಕರಿ ಅವರ ಸ್ನೇಹ ಇವೆಲ್ಲಾ ಸಮುದಾಯಗೊಂಡು ಬೇಂದ್ರೆಯಲ್ಲಿ ಕವಿ ಪ್ರತಿಭೆಯೊಡನೆ, ನಾಟ್ಯ ಪ್ರತಿಭೆಯೂ ಸಮಸಮನಾಗಿ ಸಮೃದ್ಧಿಸುವಂತೆ ಮಾಡಿದವು. ಮನೆಯಲ್ಲಿ ತಾಯಿಯ ಬಾಯಿಂದ ಹೊರಸೂಸುತ್ತಿದ್ದ ಉದಯರಾಗದ ಭಕ್ತಿಗೀತೆಗಳು ಸಂಪ್ರದಾಯದ ಹಾಡುಗಳು, ದಾಸರ ಕೀರ್ತನೆಗಳು, ಮರಾಠಿ ಸಂತರ ವಚನಗಳು, ಅಭಂಗಗಳು, ಹೃದಯ ಸಂವೇದನೆಗಳನ್ನು ಹಿಗ್ಗಿಸಿದವು." ೩(೨೧).

ಮೆಟ್ರಿಕ್ಯುಲೇಷನ್ ಮುಗಿದ ಮೇಲೆ ಕಾಲೇಜು ಶಿಕ್ಷಣಕ್ಕಾಗಿ ಪುಣೆಗೆ ತೆರಳಿದರು. ಬೇಂದ್ರೆ ಅವರ ಮಾತೃಭಾಷೆ ಮರಾಠಿಯಾದುದರಿಂದ ಮರಾಠಿ ಓದಲು-ಬರೆಯಲು ಬರುತ್ತಿತ್ತು. ಪುಣೆಯಲ್ಲಿನ ವಿದ್ಯಾರ್ಥಿ ಜೀವನದಲ್ಲಿ ಅವರಿಗೆ ಮರಾಠಿ ಸಾಹಿತ್ಯದ ಕಾವ್ಯ ಪರಿಚಯವಾಯಿತು. "ತಮ್ಮ ಮೊಟ್ಟಮೊದಲ ಕವನ ಝೂಲೀವೀಸ ವಯಾಸ ಅಜವನ್ನು ಮರಾಠೀ ಭಾಷೆಯಲ್ಲಿ ರಚಿಸಿದರು. ಮರಾಠಿ ಕವಿ-ಶಿಕ್ಷಕ ಕೇಶವ ಸುತರ 'ತುತಾರಿ' ಎಂಬ ಮರಾಠಿ ಕವನದ ಹೆಸರನ್ನು ತಮ್ಮ ಮೊದಲ ಪ್ರಕಟಿತ ಕವನ 'ತುತ್ತೂರಿ'ಗೆ ಇಟ್ಟಿದ್ದನ್ನು ಬೇಂದ್ರೆಯವರೇ ಹೇಳಿಕೊಂಡಿದ್ದಾರೆ." ೪

೧೯೧೮ ರಲ್ಲಿ ಬಿ.ಎ. ಪಾಸಾದ ನಂತಹ ಬೇಂದ್ರೆ ಮತ್ತೆ ಧಾರವಾಡದ ಕಾಮನ ಕಟ್ಟೆಗೆ ಬಂದರು ಅದೇ ವರ್ಷ ಧಾರವಾಡದಲ್ಲಿ ನಾಲ್ಕನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನ ನಡೆಯಿತು. ಆರ್. ನರಸಿಂಹಾಚಾರ್ಯರು ಸಮ್ಮೇಳನಾಧ್ಯಕ್ಷರು. ಕವಿ ಸಮ್ಮೇಳನದಲ್ಲಿ ಬೇಂದ್ರೆ ಅವರಿಂದ 'ಕೋಗಿಲೆ' ಕಾವ್ಯವಾಚನ ನಡೆಯಿತು. ಬೇಂದ್ರೆಯವರ ಸ್ವರಚಿತ ಕವನವನ್ನು ಆಲಿಸಿದ ಆರ್. ನರಸಿಂಹಾಚಾರ್ಯರು, ಕುಲ ಪುರೋಹಿತ ಆಲೂರು ವೆಂಕಟರಾಯ, ಕಡಪ ರಾಘುವೇಂದ್ರರಾಯರು, ಮುದವೀಡು ಕೃಷ್ಣರಾಯರು ಕವಿಗೆ ಆಶೀರ್ವಚನ ಪೂರ್ವಕ ಮೆಚ್ಚುಗೆಯನ್ನು ಸಲ್ಲಿಸಿದರು.

೧೯೨೪ ರಿಂದ ೧೯೩೨ ರವರೆಗೆ ಹಳೆಯ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಕೆಲಸ ಮಾಡಿದರು. ಮುಂದೆ ಬೇಂದ್ರೆ ಮಾಸ್ತರ ಎಂದೇ ಪ್ರಸಿದ್ಧರಾದರು. ದೇಶದ ಸ್ವಾತಂತ್ರ ಹೋರಾಟದ ಬಿರುಗಾಳಿಗೆ ಸಿಲುಕಿದ ಕವಿ 'ಬೇಂದ್ರೆ ಮಾಸ್ತರ್' ವೈಯಕ್ತಿಕವಾಗಿ ಸಾಕಷ್ಟು ನರಳಿದರು. ಅವರ 'ನರಬಲಿ' ಎಂಬ ದೇಶಭಕ್ತಿ ಗೀತೆ - ರಾಜದ್ರೋಹ ಎಂದು ಜೇಲು ವಾಸವನ್ನು ವಿಧಿಸಿತು. ನರಬಲಿಯಿಂದ ತನ್ನ ಬದುಕಿನಲ್ಲಾದ ಗೊಂದಲ ನೋವುಗಳನ್ನು ತಮ್ಮ ಸಖೀಗೀತದಲ್ಲಿ ಹೇಳಿಕೊಳ್ಳುತ್ತಾರೆ.

ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಗಿ
ಮುಗದದ ಣಲೆಗಾಳಿ ಮುಂದೆಳೆದಿತು
ಆಳುವರ ಮೇಲೊಬ್ಬ ಆಳುವನಿರದಿರೆ
ಹಾಳಾಗಿ ಹೋಗಿತ್ತು ಈ ಜಗವು. '೫'

ಜೈಲು ವಾಸವಾಗಿದ್ದರ ಕಾರಣದಿಂದ ಅವರಿಗೆ ಎಲ್ಲೂ ನೌಕರಿ ಕೊಡಬಾರದೆಂಬ ಸರಕಾರಿ ಆಜ್ಞೆ ಆಗಿದ್ದರಿಂದ ಬೇಂದ್ರೆ ಅವರಿಗೆ ನಿರುದ್ಯೋಗ-ಬಡತನ ಕಾಡಿತು. ೧೯೩೫ ರಲ್ಲಿ ಪೂನಾಗೆ ತೆರಳಿ ಎಂ.ಎ. ಮುಗಿಸಿದರು. ೧೯೪೦ ರವರೆಗೆ ಉದ್ಯೋಗವಿಲ್ಲದ ಕಾರಣ ಮಾಸ್ತಿಯವರ 'ಜೀವನ' ಪತ್ರಿಕೆಯ ಸಂಪಾದಕತ್ವವನ್ನು ವಹಿಸಿದರು. ೧೯೪೨ ರಿಂದ ೪೩ ರ ತನಕ ಪೂನಾ ಕಾಮರ್ಸ್ ಕಾಲೇಜಿನಲ್ಲಿ ಕನ್ನಡದ ಅರೆಕಾಲಿಕ ಅಧ್ಯಾಪಕರಾಗಿ ಕೆಲಸಮಾಡಿದರು. ನಂತರ ೧೯೪೪ ರಿಂದ ೧೯೫೬ ರ ವರೆಗೆ ಸೊಲ್ಲಾಪುರದ ಡಿ.ವಿ.ಜಿ. ಕಾಲೇಜಿನಲ್ಲಿ ೧೨ವರ್ಷ ಪ್ರಾಧ್ಯಾಪಕ ವೃತ್ತಿಯನ್ನು ನಿರ್ವಹಿಸಿದರು.

೧೯೧೯ ರಲ್ಲಿ ಲಕ್ಷ್ಮೀಬಾಯಿಯವರೊಡನೆ ವಿವಾಹವಾಯಿತು. ಅವರ ವೈಯಕ್ತಿಕ ಬದುಕಿನಲ್ಲಿ ಸುಖಕ್ಕಿಂತ ದುಃಖವೇ ಹೆಚ್ಚಾಗಿತ್ತು. ಬಡತನ-ನಿರುದ್ಯೋಗ-ನೋವು-ಸಾವುಗಳು ಬೇಂದ್ರೆಯವರ ಬದುಕಿನುದ್ದಕ್ಕೂ ಕಾಡಿದವು. ದುಃಖ-ನೋವುಗಳು ಹೆಚ್ಚಿದಷ್ಟು ಅವರು ಧೃತಿಗೆಡೆದ ಸಾಹಿತ್ಯದ ಕಡೆಗೆ ಹೆಚ್ಚು ಹೆಚ್ಚು ತಲ್ಲೀನರಾದರು. ಸಾವು ನೋವು ಅವರ ಸಾಹಿತ್ಯದ ಕಣ್ಣನ್ನು ಹಿಗ್ಗಲಿಸಿದೆವು. ಬೇಂದ್ರೆಯವರ ಬದುಕಿನಲ್ಲಿ 'ಸಾವು'ಮಹತ್ವದ ತಾತ್ರವನ್ನು ವಹಿಸಿತೆನ್ನಬೇಕು. ಬಾಲ್ಯದಿಂದಲೇ ಸಾವನ್ನು ಸಮೀಪದಲ್ಲೇ ಕಂಡರು. ತನ್ನನ್ನು ಸಾಕಿ ಸಲುಹಿದ ಅಜ್ಜಿ ಗೋದೂಬಾಯಿ, ತಂದೆ ರಾಮಚಂದ್ರರಾಯ, ಇಬ್ಬರು ತಮ್ಮಂದಿರಿ ಮರಣ ಒಂಭತ್ತು ಮಕ್ಕಳಲ್ಲಿ ಮೂವರು ಮಾತ್ರ ಉಳಿದುಕೊಂಡರು ಅವರ ಚಿಕ್ಕಪ್ಪನ ಹೆಂಡತಿ, ಅವರ ಆಪ್ತರಾಗಿದ್ದ ಶಂಕರಗೌಡ, ಮಧುರ ಚೆನ್ನ, ಚೆನ್ನಮಲ್ಲಪ್ಪ, ಕಪಾಲಿ ಹಾಗೂ ಅವರ ಸಾಹಿತ್ಯಕ್ಕೆ ಬಹುದೊಡ್ಡ ಪ್ರಭಾವ ಬೀರಿದ್ದ ಗಾಂಧೀಜಿ ಹಾಗೂ ಅರವಿಂದರು ಇಲ್ಲವಾದರು. ತನ್ನ ಆಪ್ತೇಷ್ಟರನ್ನೆಲ್ಲಾ ಕಳೆದುಕೊಂಡು ನೊಂದು ಬದುಕಿದ ಬೇಂದ್ರೆ ತಾವು ಪಟ್ಟ ಪಾಡನ್ನೆಲ್ಲಾ ಹಾಡಾಗಿಸಿದರು. ಬೇಂದ್ರೆಯವರ ಸಖೀಗೀತ ಅವರ ಬದುಕಿನುದ್ದದ ನೋವನ್ನೆಲ್ಲಾ ಬಿಚ್ಚಿಡುತ್ತದೆ. ಅವರ 'ಹಾಡು ಪಾಡು' ರಾಮ ರಾಮ, ಆನಂದ, ನೀ ಹಿಂಗ ನೋಡಬ್ಯಾಡ ನನ್ನ ಎಂಬ ಕವನಗಳು ಅವರ ನೋವು ಹಾಡಾಗಿ ಹರಿದದ್ದಕ್ಕೆ ಸಾಕ್ಷಿಯಾಗಿವೆ.

೨:೨ ಪ್ರಭಾವ :

ಬೇಂದ್ರೆಯವರ ಸಾಹಿತ್ಯ ಸೃಷ್ಟಿಗೆ ಪ್ರಭಾವ ಬೀರಿದವರು ಹಲವರು. ಕವಿ ಕೀಟ್ಸ್, ಮಹಾರಿ ಕವಿ ಕೇಶವ ಸುತ, ಗೋವಿಂದಾಗ್ರಜರು, ಖಲೀಲ್ ಗಿಬ್ರಾನ್, ರವೀಂದ್ರನಾಥ ಠಾಕೂರ್, ಶ್ರೀ ಅರವಿಂದರು, ಶ್ರೀ ಮಾತೆ ಸಂಸ್ಕೃತದ ಶಕ್ತಿ ಕವಿ ಕಾಳಿದಾಸ ಹೀಗೆ ಸಂಸ್ಕೃತ, ಮರಾಠಿ, ಬಂಗಾಳಿ, ಇಂಗ್ಲೀಷ್ ಭಾಷಾ ಸಾಹಿತ್ಯಗಳಿಂದ ಪ್ರೇರಣೆ ಪಡೆದರು. ಕನ್ನಡ ಭಾಷೆಯ ಪ್ರಾದೇಶಿಕ ಸೊಗಡಿನ ಚೌಕಟ್ಟನೊಳಗೆ ಅದನ್ನು ದುಡಿಸಿಕೊಂಡರು. ಕೀಟ್ಸ್ ಕವಿಯ ಚತುರ್ಮುಖ ದರ್ಶನವಾದ Sensous beauty, Imaginative beauty, Intellectual beauty and ideal beautyಗಳು ಹಾಗೂ ಖಲೀಲ್ ಗಿಬ್ರಾನ್‌ನ ನಾನು - ನೀನು =ನಾವುಗಳ ವಿಚಾರಧಾರೆ ಸಾಕಷ್ಟು ಪರಿಣಾಮ ಬೀರಿತು. ಇದೇ ನಾಕುತಂತಿ ಕೃತಿಯ ಮೂಲ ಮಂತ್ರವಾಗಿರುವುದನ್ನು ಗುರುತಿಸಬಹುದಾಗಿದೆ. ಬೇಂದ್ರೆಯವರ ಸಾಹಿತ್ಯದ ಮೇಲೆ ಗೆಳೆಯರ ಬಳಗದ ಪ್ರಭಾವ ಹೇಳತೀರದಷ್ಟು ಪುಣೆಯ ಶಾರದ ಮಂಡಲಿ ಹಾಗೂ ಅಮೇರಿಕಾದ ಬ್ರುಕ್‌ಫಾರ್ಮ್‌ಗಳು ಗೆಳೆಯರ ಗುಂಪನ್ನು ಹುಟ್ಟುಹಾಕಲು ಕಾರಣವಾಯಿತು. ಸಮಾನಾಸಕ್ತರು, ಸಹೃದಯರು, ಸ್ನೇಹಿತರು, ಬುದ್ಧಿಜೀವಿಗಳು ಸೇರಿಕೊಂಡು ಸಾಹಿತ್ಯ-ಸಂಸ್ಕೃತಿಯ ನಿರಂತರ ಚರ್ಚೆಯನ್ನು ಮಾಡಲು ಈ ಬಳಗ ಪ್ರೇರಣೆಯಾಯಿತು. ಗೆಳೆಯರ ಗುಂಪಿನ ಸದಸ್ಯರೆಲ್ಲರೂ ಪ್ರತಿಭಾವಂತರು. ತಮ್ಮ ಕವನಗಳ ಪ್ರಕಟಣೆ ಪ್ರಬಂಧ ಮಂಡನೆಗಳನ್ನೆಲ್ಲಾ ವೈಯಕ್ತಿಕ ಹೆಸರಿನಿಂದ ಪ್ರಕಟಿಸದೆ 'ಗೆಳೆಯರ ಗುಂಪು' ಎಂದೇ ಗುರುತಿಸಿಕೊಂಡರು. ೧೧ನೇ ಸಾಹಿತ್ಯ ಸಮ್ಮೇಳನದಲ್ಲಿ ಗೀತಾಂಜಲಿಯನ್ನು ಕುರಿತು ಪ್ರಬಂಧವನ್ನು ಗುಂಪಿನ ಹೆಸರಿನಲ್ಲಿ ಮಂಡಿಸಿತು. ಈ ಗುಂಪಿನಿಂದ 'ಸ್ವಧರ್ಮ' 'ಜಯಕರ್ನಾಟಕ' 'ವಾಗ್ಭೂಷಣ' ಎಂಬ ಪತ್ರಿಕೆಗಳನ್ನು ಹೊರಡಿಸಿತು. ಈ ಪತ್ರಿಕೆ ಸ್ವಾತಂತ್ರ ಪೂರ್ವದ ಸಂದರ್ಭದಲ್ಲಿ ನಮ್ಮ ನಾಡಿನಲ್ಲಿ ಇದ್ದಂತಹ ದೇಶಿ ಸತ್ತ್ವ, ದೇಶೀ ಶಕ್ತಿಯನ್ನು ಪ್ರಕಟಪಡಿಸುವಲ್ಲಿ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿತು. 'ಪತ್ರಿಕೆ ಧರ್ಮ, ಆಧ್ಯಾತ್ಮ ವಿಚಾರಗಳ ಚರ್ಚೆಗೆ ಪ್ರಮುಖ ಸ್ಥಾನ ನೀಡಿತು. ಬೇಂದ್ರೆಯವರ ಈ ಹೇಳಿಕೊಳ್ಳುವಂತೆ, "ಪರಲೋಕ ಸಾಧನೆಯ ವಿಚಾರಗಳ ಜೊತೆಗೆ ಇಹದ ಬಗೆಗೂ ಚಿಂತಿಸುವ ಮುಖ್ಯ ಕೆಲಸವನ್ನು ಪತ್ರಿಕೆ ಮಾಡಿತು. ಬೇಂದ್ರೆಯವರ ಮುಖ್ಯ ಕವನಗಳು, ನಾಟಕಗಳು ಮೊದಲು ಇಲ್ಲಿ ಪ್ರಕಟಗೊಂಡವು."೬

ಗೆಳೆಯರ ಗುಂಪು ಬೇಂದ್ರೆಯವರ ಬದುಕಿನುದ್ದಕ್ಕೂ ವ್ಯಕ್ತಿಗತವಾಗಿ ಹಾಗೂ ಸಾಹಿತ್ಯಕವಾಗಿ ಸಾಕಷ್ಟು ಪರಿಣಾಮವನ್ನು ಬೀರಿತು. ಅಲ್ಲಿನ ಗೆಳೆಯರ ಸ್ನೇಹ-ಪ್ರೀತಿ-ವಿಶ್ವಾಸ-ಸಹೃದಯತೆ, ಸಾಹಿತ್ಯದ ಬದುಕಿನಲ್ಲಿ ತನ್ನ ಛಾಪನ್ನು ಮೂಡಿಸಿತು. ಸಾಹಿತ್ಯಕ್ಕಿಂತ ಬದುಕು ದೊಡ್ಡದು. ಸಾಹಿತ್ಯ ಬದುಕಿನ ಕನ್ನಡಿ ಆಗಬೇಕು ಎನ್ನುವುದೇ ಬೇಂದ್ರೆಯವರ ಧ್ಯೇಯೋದ್ದೇಶವಾಗಿತ್ತು. ಗೆಳೆತನದ ಬದುಕಿನಲ್ಲಿ ಬೇಂದ್ರೆ ತಮ್ಮನ್ನು ಗುರುತಿಸಿಕೊಳ್ಳಲು ಇಚ್ಛಿಸಿದರು. ಅವರು ಗೆಳೆಯರ ಗುಂಪಿನಿಂದ ಪಡೆದ ಸ್ನೇಹ ಸುಖ ಅನನ್ಯ ಹಾಗೂ ಅನುಪಮವಾದದ್ದು. "ಗೆಳೆಯರ ಗುಂಪು ಸಾಕಷ್ಟು ಸಾಹಿತ್ಯಕ, ಸಾಂಸ್ಕೃತಿಕ ಕಾರ್ಯ ಮಾಡುತ್ತಿದ್ದವು. ಸ್ನೇಹ, ಮಾನವೀಯ ಭಾವನೆ ಸಾಹಿತ್ಯಾಸಕ್ತಿ, ನಮ್ಮ ಸಂಸ್ಕೃತಿ, ಪರಂಪರೆಗಳ ಸದಭಿರುಚಿಯಾಗಿದೆ ಸಮಾಜದಲ್ಲಿ ಬೆಳೆಸುವುದು ಗುಂಪಿನ ಮುಖ್ಯ ಧ್ಯೇಯೋದ್ದೇಶಗಳಾಗಿದ್ದವು 'ನಾನು ಬಡವಿ ಆತ ಬಡವ ಒಲವೆ ನಮ್ಮ ಬದುಕು' ಎಂಬ ನಿಲುವು ಈ ಗುಂಪಿನದಾಗಿತ್ತು. ಅಲ್ಲಿದ್ದ ಸಮಾನ ಮನೋಭಾವದ ಸಹೃದಯರು, ಸಂವೇದನಾಶೀಲರಾದ ಗೆಳೆಯರು ನಮ್ಮ ಸಾಹಿತ್ಯ, ಜಾಗತಿಕ ಸಾಹಿತ್ಯ, ನಮ್ಮ ಸಂಸ್ಕೃತಿಯ ಸಂದರ್ಭದಲ್ಲಿನ ಸಮಸ್ಯೆಗಳು, ನೋವು ನಲಿವುಗಳನ್ನು ಕುರಿತು ಚಿಂತಿಸಿದರು. ಸ್ವತಂತ್ರ ಕವನಗಳನ್ನು ವಾಚಿಸಿದರು. ಕತೆಬರೆದರು,

ನಾಟಕ ರಚಿಸಿದರು. ಆಧ್ಯಾತ್ಮದ ವಿಚಾರವಾಗಿ, ಧರ್ಮದ ವಿಚಾರವಾಗಿ ಚರ್ಚಿಸಿದರು. ಸ್ನೇಹದ ಬಂಧನವನ್ನು ಕ್ಷಣಕಾಲ ತೊಡೆದು ಗಂಭೀರವಾಗಿ ವಿಮರ್ಶಿಸಿದರು. ಪರಸ್ಪರ ಆರೋಗ್ಯ, ವಿಮರ್ಶೆ, ಸ್ವ ವಿಮರ್ಶೆ, ಅಂತರ ಪರಿವೀಕ್ಷಣೆಗಳನ್ನು ಮಾಡಿಕೊಂಡರು. ಗೆಳೆಯರ ಗುಂಪು ಒಂದು ರೀತಿಯಲ್ಲಿ ೧೨ನೇ ಶತಮಾನದ ಅನುಭವ ಮಂಟಪದಂತಹ ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರಗಳ ಕಮ್ಮಟವಾಯಿತು. ಯುವಕವಿ, ಚಿಂತಕರ ಸಾಧನಾ ವೇದಿಕೆಯಾಯಿತು. ಈ ಸಂದರ್ಭದಲ್ಲಿಯೇ ಗುಂಪು ಬಹಳ ಹೆಮ್ಮೆಯಿಂದ ನಾಡಹಬ್ಬದ ಆಚರಣೆಯ ಹಂದರದಲ್ಲಿ 'ಪಂಪೋತ್ಸವ' 'ವಿದ್ಯಾರಣ್ಯೋತ್ಸವ', 'ರವೀಂದ್ರೋತ್ಸವ' ಮುಂತಾದ ಉತ್ಸವಗಳಿಗೆ ಒತ್ತು ನೀಡುವ ಮುಖಾಂತರ ಸಾಹಿತ್ಯ ಉತ್ಸವಗಳನ್ನು ಆಚರಿಸಿತು." ೭ ಸದ್ಭಾವನೆಯಿಂದ ಸದಾಶಯವನ್ನು ಹೊತ್ತು ಹೊರಟ ಸಾಹಿತ್ಯಿಕ ಮೈತ್ರೀ ಸಂಘಟನೆಯ ಕುರಿತು ಬೇಂದ್ರೆ ತಮ್ಮ ಕವನದಲ್ಲಿ ಹೀಗೆ ಗೌರವ ಸಲ್ಲಿಸುತ್ತಾರೆ.

ಒಂದು ಜನ್ಮದ್ದಲ್ಲಾ ಗೆಳೆತನದ ಸಾಧನೆ
ಜನ್ಮ ಜನ್ಮಕ್ಕುಂಟು ಹೊಸತು ತನು '೮'

ತಮ್ಮ ಗೆಳೆತನವನ್ನು ಮೈತ್ರಿಯ ಉಗಾಭೋಗ, ಬ್ರಹ್ಮಸೂತ್ರ ಎಂದೆಲ್ಲಾ ಗೌರವಿಸಿದ ಬೇಂದ್ರೆ ಅಗಲಿ ಹೋದ ಪ್ರತಿ ಗೆಳೆಯರ ಬಗೆಗೂ ಅಶ್ರುನಮನಗಳನ್ನು, ಸ್ನೇಹ ಶ್ರದ್ಧಾಂಜಲಿಯನ್ನು ಕಾವ್ಯಗಳ ಮೂಲಕ ಅರ್ಪಿಸಿದ್ದಾರೆ.

'ನಾನಾ ಹೋದೆನೋ! ಹೋದೆನೋ? ಅವನ ಬೆನ್ನೇ
'ಚನ್ನನೂ ಹೋದನೋ ? 'ನಾ', 'ನೀ'ಎನ್ನುವ 'ಶ್ರೀಧರಂ' ವ್ಯಥೆಯೊಳೆ
ತಾನೀಗಳೇನಾದನೊ! '೯'

ವೈಯಕ್ತಿಕ ಬದುಕಿನಲ್ಲಿ ಅನೇಕರನ್ನು ಕಳೆದುಕೊಂಡ ಬೇಂದ್ರೆ ಅಜ್ಜಿ ಗೋದಾಬಾಯಿ, ತನ್ನ ಒಡಹುಟ್ಟು ತಾಯಿ, ಗೆಳೆಯರು ಪತ್ನಿ ಲಕ್ಷ್ಮೀದೇವಿ ಮಕ್ಕಳಾದ ರಾಮಾ, ಆನಂದರ ಬಗೆಗೆಲ್ಲಾ ಕಾವ್ಯ ಮುಖೇನ ಅಶ್ರುತರ್ಪಣ ಸಲ್ಲಿಸಿದ್ದಾರೆ. ಡಿ.ವಿ.ಜಿ, ಕವಿ ಶಿಷ್ಯ ಪಂಜೆ ಮಂಗೇಶರಾಯ, ವಿ.ಕೃ. ಗೋಕಾಕ, ದೇವುಡು ಗೋವಿಂದಪೈ, ಮಧುರ ಚೆನ್ನ, ಆಲೂರ, ಸಿದ್ಧವನಹಳ್ಳಿ ಕೃಷ್ಣಶರ್ಮ, ಕೊಡಗಿನ ಗೌರಮ್ಮ, ರಾಮಚಂದ್ರರಾಯ, ಶ್ರೀಕಂಠಯ್ಯ, ಶಂಕರಗೌಡ, ವೀ.ಸಿ., ಶಾಂತ ಕವಿ, ಮಲ್ಲಿಕಾರ್ಜುನ ಮನ್ಸೂರ ಹೀಗೆ ತಮ್ಮ ಸಖ್ಯಕ್ಕೆ ನೆರೆದ ಹಿರಿಕಿರಿಯ ಗೌರವಾನ್ವಿತರಿಗೆಲ್ಲಾ ಅಕ್ಷರ ನಮನ - ಕಾವ್ಯನಮನ ಸಲ್ಲಿಸಿರುವುದು, ಬೇಂದ್ರೆಯವರ ಹೃದಯ ವೈಶಾಲ್ಯತೆಯನ್ನು ತೋರುತ್ತದೆ.

ಜಯ ಜಯಾಗಾಂಧಿ ಮೋಹನಾ
ರಾಷ್ಟ್ರ ದೋಹನಾ
ಸತ್ಯ ಶರಣಾ - ಸತ್ಯಶರಣಾ
ಇಗೋ
ತರುಣ-ಕವನಾ ಸ್ಮರಣ ಕವನಾ '೧೦'

ಎಂದು ಗಾಂಧೀಜಿಗೆ ನುಡಿನಮನ ಸಲ್ಲಿಸಿದ್ದಾರೆ. ಶ್ರೀ ಅರವಿಂದರು, ಶ್ರೀಮಾತೆ ರವೀಂದ್ರರಿಗೂ ಹೀಗೇ ನಮನ ಸಲ್ಲಿಸಿರುವ ಬೇಂದ್ರೆಯವರಿಗೆ ಕಾವ್ಯ ಸೃಷ್ಟಿ ಹಾಗೂ ಜೀವನ ಸೃಷ್ಟಿ ಪ್ರತ್ಯೇಕ ಕ್ರಿಯೆಗಳಾಗಿ ಉಳಿದಿರಲಿಲ್ಲ. ಅವು ಕವಿಯೊಬ್ಬನು ಅನುಭವಿಸುವ ಅತ್ಯಂತ ನೋವಿನ, ಆದರೆ ಅತ್ಯಂತ ಸಾರ್ಥಕ ಕ್ರಿಯೆಯಾಗುತ್ತದೆ.

೨:೩ ಸಾಹಿತ್ಯ ಕೃಷಿ :

ಬೇಂದ್ರೆಯವರು ಕೃಷ್ಣಕುಮಾರಿ ಕವನಸಂಕಲನ ಮೊದಲುಗೊಂಡು ಸುಮಾರು ೩೫ ಕವನ ಸಂಕಲನಗಳನ್ನು ಹೊರ ತಂದಿದ್ದಾರೆ. ಗರಿ, ಮೂರ್ತಿ ಮತ್ತು ಕಾಮಕಸ್ತೂರಿ, ಸಖಿಗೀತ, ಮೇಘದೂತ, ಹಾಡು-ಪಾಡು, ಗಂಗಾವತರಣ, ಕೃಷ್ಣಕುಮಾರಿ, ಮುಕ್ತಕಂಠ, ಚೈತ್ಯಾಲಯ, ಸೂರ್ಯಪಾನ, ಹೃದಯ ಸಮುದ್ರ, ಜೀವ ಲಹರಿ, ಅರಳು-ಮರಳು (ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ) ನಮನ, ಸಂಚಯ, ಉತ್ತರಾಯಣ, ಮುಗಿಲ ಮಲ್ಲಿಗೆ, ಯಕ್ಷ, ಯಕ್ಷ್ಮೀ, ನಾಕುತಂತಿ (ಜ್ಞಾನಪೀಠ ಪ್ರಶಸ್ತಿ ಕೃತಿ) ಮರ್ಯಾದೆ, ಶ್ರೀಮಾತಾ, ಬಾ ಹತ್ತರ, ಇದು ನಭೋವಾಣಿ, ವಿನಯ ಮತ್ತೆ ಶ್ರಾವಣ ಬಂತು, ಒಲವೆ ನಮ್ಮ ಬದುಕು, ಚತುರೋಕ್ತಿ, ಪರಾಕಿ, ಕಾವ್ಯವೈಖರಿ, ಬಾಲಭೋದೆ, ತಾ ಲೆಕ್ಕಣಿಕೆ ತಾ ದೌತಿ, ಚೈತನ್ಯದ ಪೂಜೆ, ಪ್ರತಿಬಿಂಬಗಳು, ಶ್ರಾವಣ ಪ್ರತಿಭೆ ಇತ್ಯಾದಿ.

ಬೇಂದ್ರೆಯವರು ಜೀವನಾನುಭವದ ಎಲ್ಲವನ್ನೂ ಕಾವ್ಯದಲ್ಲಿ ಪಡಿ ಮೂಡಿಸಿದರು. ಶ್ರಾವಣಕವಿ, ಶ್ರಾವಣ ಪ್ರತಿಭೆ ಎಂದೇ ಖ್ಯಾತಿಗಳಿಸಿದ ಬೇಂದ್ರೆ ಶ್ರಾವಣ, ಮಳೆ, ಕೋಗಿಲೆ, ಬೆಳಗು, ಪ್ರಕೃತಿಗಳ ಬಗ್ಗೆ ಸಾಕಷ್ಟು ಕೃಷಿ ಮಾಡಿದ್ದಾರೆ. ಇವರ ಬಹಳಷ್ಟು ಕವನಗಳು ಪ್ರಕೃತಿ ಕೇಂದ್ರಿತ ಕವನಗಳಾಗಿವೆ. (ಬೆಳಗು ಹಕ್ಕಿ ಹಾರುತಿದೆ ನೋಡಿದಿರ) ಕಾವ್ಯವನ್ನು ಧ್ಯಾನಿಸಿ ಬರೆದ ಕವಿ ಇವರು. ಬೇಂದ್ರೆಯವರು ತಮ್ಮ ಅಮೂರ್ತ, ಅನುಭಾವಿಕ ಆಲೋಚನೆಗಳನ್ನು, ತಮ್ಮ ಜೀವನದರ್ಶನವನ್ನು ತಮ್ಮ ಕಾವ್ಯದಲ್ಲಿ ಮಂಡಿಸುತ್ತಾರೆ. ಅನುಭಾವಿಕತೆ ಮತ್ತು ತಾತ್ವಿಕತೆ ಬೇಂದ್ರೆಯಂತಹ ಅನುಭಾವಿ ಕವಿಗಳ ಬೆನ್ನೆಲುಬು, ಅರವಿಂದ ತತ್ತ್ವಜ್ಞಾನದ ಹಿನ್ನೆಲೆಯಲ್ಲಿ ಇವರ ಅನುಭಾವಿಕ ಗೀತೆಗಳು ಮೂಡಿಬಂದಿವೆ.

ಮಾನವತಾವಾದ, ಸಮಾಜವಾದ, ಬೇಂದ್ರೆ ಕಾವ್ಯದ ಮುಖ್ಯ ಕಳಕಳಿಯಾಗಿದೆ. 'ನರಬಲಿ' 'ಮೂವತ್ತಮೂರು ಕೋಟಿ ಮೂಲಕ ದೇಶಭಕ್ತಿ, ಸಮಾಜ ಪರ ಕಾಳಜಿಯನ್ನು ತೋರುತ್ತಾರೆ. ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯ ಧ್ವನಿ ಇವರ ಕಾವ್ಯಗಳಲ್ಲಿವೆ. ಹಸಿವು, ಅನ್ನಯಜ್ಞ, ಯಜ್ಞ, ಕುರುಡು ಕಾಂಚಾಣ, ಅನ್ನಬೇಕು, ಭೈರಾಗಿಯ ಹಾಡು, ದರಿದ್ರನಾರಾಯಣ, ಕೆಲಸವಿಲ್ಲದವರ ಹಾಡು, ಅನ್ನಬಕಾಸುರರ ರಾಜ್ಯ ಹೀಗೆ ಕವನ ಮುಖೇನ ಮೂಲಭೂತ ಅವಶ್ಯಕತೆಯಾದ ಅನ್ನ-ಚಿನ್ನ ವಾಗಿರುವುದರ ದುರಂತವನ್ನು ಹೇಳುತ್ತಾರೆ.

ಸಾಂಪ್ರದಾಯಿಕ ಹಿನ್ನೆಲೆ ಅವರಿಗಿದ್ದರೂ ಆ ನೆಪದಲ್ಲಿ ಶೋಷಣೆ ನಡೆಸುವುದು, ಮೂಢನಂಬಿಕೆಯನ್ನು ಪೋಷಿಸುವುದು, ಅನಿಷ್ಟ ಅಮಾನವೀಯ ಕ್ರೂರ ಪದ್ಧತಿಗಳ ಆಚರಣೆಯನ್ನು ತೀವ್ರವಾಗಿ ಪ್ರತಿಭಟಿಸುವ ಸಂವೇದನಾಶೀಲ ಮನಸ್ಸು ಕಾವ್ಯದ ಹಿನ್ನಲೆಯಲ್ಲಿ ಕೆಲಸ ಮಾಡಿದೆ. ವಿಶೇಷವಾಗಿ, 'ಹೆಣ್ಣು' ಇವರ ಮೂಲಭೂತ ಕಾಳಜಿಗಳಲ್ಲಿ ಒಂದಾಗಿರುವುದು ಗಮನಾರ್ಹ. ಪಿತೃ ಪ್ರಧಾನ ವ್ಯವಸ್ಥೆಯ ಹಿನ್ನೆಲೆಯಲ್ಲಿ ಶೋಷಿತಳಾಗುವ ಹೆಣ್ಣಿನ ಕುರಿತು ಮರಗುತ್ತಾರೆ. ಪುಟ್ಟ ವಿಧವೆ, ಹೆಣದ ಹಿಂದೆ ಕಥೆಯಾದಳು ಹುಡುಗಿ ಕವನಗಳು ಇವರ ಸ್ತ್ರೀ ಕಾಳಜಿಗೆ ಉದಾಹರಣೆಗಳಾಗಿವೆ. ಬೇಂದ್ರೆ ಹೆಣ್ಣನ್ನು 'ಮಾತೃತತ್ತ್ವದ' ಚಿಂತನೆಯಲ್ಲಿ ನೋಡಿದ್ದಾರೆ- ತಾಯಿ, ಹೆಂಡತಿ, ಗೆಳತಿ, ಹೆಣ್ಣು- ಯಾರೇ ಆಗಿರಲಿ ಅವಳಲ್ಲಿ ಆದರ್ಶವನ್ನು ಕಾಣುತ್ತಾರೆ.

"ಭೂಮಿತಾಯಿ ಬೇಂದ್ರೆ ವ್ಯಕ್ತಿತ್ವದ ಮೂಲ ಪ್ರೇರಣೆಗಳಲ್ಲಿ ಒಂದು. ಎಂಬುದನ್ನು ಈಗಾಗಲೇ ವಿಮರ್ಶೆ ಗುರುತಿಸಿದೆ. ಈ ಭೂಮಿತಾಯಿ ತತ್ತ್ವವನ್ನು ಎಂಬುದು ಒಟ್ಟಾರೆಯಾಗಿ ತಾಯಿ ತತ್ತ್ವದ ಒಂದು ಮುಖ ಅನೇಕ ರೂಪಗಳಲ್ಲಿ, ವಿಧಗಳಲ್ಲಿ ತಾಯಿ ತತ್ತ್ವವನ್ನು ಬೇಂದ್ರೆಯವರ ಸೃಜನಶೀಲ ವ್ಯಕ್ತಿತ್ವವನ್ನು ಕ್ರಿಯಾಶೀಲವನ್ನಾಗಿ ಮಾಡಿದೆ. ಈ ತಾಯಿ ತತ್ತ್ವದ ಮುಖ್ಯ ನೆಲೆಗಳು ಎಂದರೆ ತುಂಬು ಪ್ರೀತಿ ಮತ್ತು

ರಕ್ಷಕತೆ" ೧೧ ಈ ನೆಲೆಯಲ್ಲಿ ಹೆಣ್ಣಿನ ಪ್ರೇಮದ, ವಾತ್ಸಲ್ಯದ ಸಖ್ಯದ, ತಾಯ್ತನದ ರೂಪಗಳನ್ನು ಕಾವ್ಯದ ಮೂಲಕ ಶೋಧಿಸಿದ್ದಾರೆ. ಮರ್ತ್ಯಪ್ರೇಮ, ದೈವೀ ಪ್ರೇಮದ ಕಡೆಗೆ ಸಾಗುವತ್ತ ಯೋಚಿಸುತ್ತಾರೆ. ಪ್ರೀತಿಯ ಬಹುಮುಖದ ಶೋಧನೆಯನ್ನು ಬೇಂದ್ರೆಯವರು ಹೆಣ್ಣಿನ ಮೂಲಕ ಮಾಡಿದ್ದಾರೆ. ಪೋರಿ-ಪೋರ, ನಾನು ಬಡವಿ, ರಾಧೆಯಪಾಡು, ಕಲ್ಪವೃಕ್ಷ ವೃಂದಾವನಗಳಲಿ, ಪ್ರೇಮ-ಕಾಮವನ್ನು, ವಾತ್ಸಲ್ಯಗೀತೆಗಳನ್ನು ಕರುಳಿನ ವಚನ, ಉಯ್ಯಾಲೆ, ಸಖೀಗೀತಗಳಲ್ಲಿ ಪ್ರೌಢ ಪ್ರೇಮದ ಪರಿಪಾಕವನ್ನು ಚಿತ್ರಿಸಿದ್ದಾರೆ. ಸಖೀಗೀತ ಅವರ ಕವನ ಸಂಕಲನಗಳಲ್ಲೆಲ್ಲಾ ಅತ್ಯಂತ ಗಮನಾರ್ಹವಾದದ್ದು. ಈ ಸಂಕಲನ ಅವರ ಪ್ರೇಮದ ಆಖ್ಯಾನ ಮಾತ್ರವಲ್ಲ ಜೀವನದ ವ್ಯಾಖ್ಯಾನವೂ ಹೌದು.

'ನಾಕುತಂತಿ' ಜ್ಞಾನಪೀಠ ಪ್ರಶಸ್ತಿ ವಿಜೇತ ಕೃತಿ. ವಿಮರ್ಶೆಯ ಮುಷ್ಟಿಗೆ ಸುಲಭವಾಗಿ ದಕ್ಕಲಾರದ ಕವನಗಳು ಇಲ್ಲಿವೆ ಎಂಬ ಮಾತನ್ನು ಮೀರಿ ಕವನಗಳು ಅನುಭಾವದ ಎತ್ತರಕ್ಕೆ ಬೆಳೆಯುತ್ತವೆ. ಖಲೀಲ್ ಗಿಬ್ರಾನ್‌ನ ನಾನು-ನೀನು-ನಾವುಗಳು, ಕೀಟ್ಸ್ ಕವಿಯ ಚತುರ್ಮುಖ ದರ್ಶನದ ಪರಿಕಲ್ಪನೆಯ ಮೂಸೆಯಲ್ಲಿ ನಿಕಷಕೊಡ್ಡಿ ಬಂದವುಗಳು ಈ ಕವನಗಳು. ನಾನು-ನೀನು-ಆನು-ತಾನು-ಇವು ಬದುಕಿನ ನಾಲ್ಕುತಂತಿಗಳಲ್ಲಿ ಸಾಮರಸ್ಯದಿಂದ ಮಿಡಿಯಬೇಕೆಂಬ ಆಶಯ ಇಲ್ಲಿ ವ್ಯಕ್ತವಾಗುತ್ತದೆ.

ಆವು ಈವಿನ
ನಾವು ನೀವಿಗೆ
ಆನು ತಾನಾದ
ತನನನಾನ '೧೨'

ಬಳಗಣ್ಣು ತೆರೆಯಿಸಿ, ಹೊಳೆಯಿಸಿ, ಅರಿವಿನ ಕಣ್ಣನ್ನು ತೆರೆಸಲು ಬೇಂದ್ರೆಯವರ ಕಾವ್ಯದ ಅನುಭಾವ ಕಾರಣವಾಗುತ್ತದೆ.

**೨:೩:೧ ನಾಟಕಗಳು**

ಬೇಂದ್ರೆಯವರು ಕವಿ ಎಂದೇ ಗುರುತಿಸಲ್ಪಟ್ಟಿದ್ದರೂ ಕೂಡ ಸಾಹಿತ್ಯದ ಉಳಿದ ಪ್ರಕಾರಗಳಲ್ಲೂ ಕೆಲಸ ಮಾಡಿದ್ದಾರೆ. ಸಾಯೋಆಟ ಜಾತ್ರೆ, ಬೇಂದ್ರೆಯವರ ಅಸಂಗತ ನಾಟಕಗಳು, ತಿರುಕರ ಪಿಡುಗು (ಮೂರು ಹುಚ್ಚಾಟಗಳು) ಉದ್ಧಾರ, ನಗೆಯ ಹೂಗೆ, ಹುಚ್ಚಾಟಗಳು, ಹೊಸ ಸಂಸಾರ ಒಟ್ಟು ಹದಿನಾರು ನಾಟಕಗಳನ್ನು ಬೇಂದ್ರೆಯವರು ರಚಿಸಿದ್ದಾರೆ. ಉತ್ತಮ ವಿನೋದ ವಿಡಂಬನೆಗಳ ಸಾಮಾಜಿಕ ಪ್ರಜ್ಞೆಯ ನಾಟಕ ಕಾರರಾಗಿದ್ದರು. ನಾಟಕ ಸಾಹಿತ್ಯ ನಮ್ಮಲ್ಲಿ ಇನ್ನೂ ಸಶಕ್ತವಾಗಿ ಬೆಳೆಯಬೇಕು ಎಂಬ ಅಭಿಪ್ರಾಯ ಅವರದಾಗಿತ್ತು.

**೨:೩:೨ ವಿಮರ್ಶೆ ಹಾಗೂ ವೈಚಾರಿಕ ಕೃತಿಗಳು :**

ಬೇಂದ್ರೆ ಹಲವಾರು ವಿಮರ್ಶೆ ಹಾಗೂ ವೈಚಾರಿಕ ಕೃತಿಗಳನ್ನು ರಚಿಸಿದ್ದಾರೆ. ಸಾಹಿತ್ಯದ ವಿರಾಟ್ ಸ್ವರೂಪ, ಸಾಹಿತ್ಯ ಮತ್ತು ವಿಮರ್ಶೆ, ಸಾಹಿತ್ಯ ಸಂಶೋಧನ, ವಿಚಾರ ಮಂಜರಿ, ಮಹಾರಾಷ್ಟ್ರ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು, ಮಾತೆಲ್ಲಾ ಜ್ಯೋತಿ, ಕುಮಾರ ವ್ಯಾಸ, ಮತಧರ್ಮ ಹಾಗೂ ಆಧುನಿಕ ಮಾನವ ಇವುಗಳು ಬೇಂದ್ರೆ ರಚಿತ ವಿಮರ್ಶಾ ಕೃತಿಗಳು. ಗದ್ಯದ ವಿವಿಧ ಪ್ರಕಾರಗಳಾದ ಸಂಶೋಧನೆ, ಆತ್ಮಕಥನ,

ಭಾಷೆ ಸಂಸ್ಕೃತಿಗಳನ್ನು ಕುರಿತ ಚಿಂತನೆ, ವಿಚಾರ - ವಿವೇಕ, ಭಾಷಣಗಳು, ಮುನ್ನುಡಿಗಳು, ಹೀಗೆ ಎಲ್ಲ ಸಾಧ್ಯತೆಗಳಲ್ಲೂ ಪ್ರಭುತ್ವವನ್ನು ಸಾಧಿಸಿದ್ದಾರೆ. ಬಡತನವು ಸಾಹಿತ್ಯದ ವಸ್ತು ಏಕಾಗಿದೆ. ಎಂಬ ವಿಷಯವನ್ನೇ ಲೇಖನವನ್ನಾಗಿಸಿದ್ದಾರೆ. ಚತುರ್ಮುಖದ ವಿವರಣೆಗಳು, ಕಾವ್ಯಯೋಗ, ಕಾವ್ಯ ಪ್ರಯೋಜನ, ವಿಮರ್ಶೆ ಇತ್ಯಾದಿಗಳೆಲ್ಲಾ ಗದ್ಯವಾಗಿಸಿ ತಮ್ಮ ಶಕ್ತಿಯನ್ನು ತೋರಿದ್ದಾರೆ.

**೨:೩:೩ ಇತರೆ**

'ನಿರಾಭರಣ ಸುಂದರಿ' ಬೇಂದ್ರೆ ಅವರ ಕಥೆ ಹಾಗೂ ಹರಟೆಗಳನ್ನೊಳಗೊಂಡ ಸಂಕಲನ. ಅಪರೂಪದ ವಸ್ತುಗಳನ್ನುಳ್ಳ ಕಥೆಗಳು ಈ ಸಂಕಲನದಲ್ಲಿವೆ. ನನ್ನದು ಈ ಕನ್ನಡ ನಾಡು, ಹಕ್ಕಿ ಹಾರುತಿದೆ, ಚಂದ್ರಹಾಸ, ಹೊಸಗನ್ನಡ ಕಾವ್ಯಶ್ರೀ, ಕನಕದಾಸ ಚತುಶ್ಶತ ಮಾನೋತ್ಸವ ಸಂಸ್ಕರಣ ಸಂಪುಟ-ಇವು ಬೇಂದ್ರೆ ಅವರಿಂದ ಸಂಪಾದಿತ ಕೃತಿಗಳಾಗಿವೆ. A Theory of immortality ( a probable problem and a possible solution -Bendre Consmology series -1) ಬೇಂದ್ರೆಯವರ ಆಂಗ್ಲ ಭಾಷೆ ಕೃತಿ - ಸಂಖ್ಯಾಶಾಸ್ತ್ರ ಕುರಿತಂತಿದೆ.

ಕನ್ನಡ, ಸಂಸ್ಕೃತ, ಹಾಗೂ ಆಂಗ್ಲ ಭಾಷೆಯಲ್ಲಿ ಪ್ರಭುತ್ವ ಸಾಧಿಸಿದಂತೆ ಬೇಂದ್ರೆಯವರು ತಮ್ಮ ಮಾತೃಭಾಷೆಯಾದ ಮರಾಠಿಯಲ್ಲೂ ಹಿಡಿತ ಸಾಧಿಸಿದ್ದರು.

ತಮ್ಮ ಸೃಜನಶೀಲ ಕೆಲಸಗಳಿಗೆ ಸರಿಸಾಟಿಯಾಗುವ ಅನುವಾದವನ್ನೂ ಬೇಂದ್ರೆ ಅವರು ಮಾಡಿದ್ದಾರೆ. 'ಸಂವಾದ'(ಕವನ ಮತ್ತು ವಿಮರ್ಶೆಗಳ ಲೇಖನಗಳ ಸಂಗ್ರಹ, ಮಹಾರಾಷ್ಟ್ರದ ಕೇಳಕರ ಪ್ರಶಸ್ತಿ) ವಿಠ್ಠಲ ಸಂಪ್ರದಾಯ ಒಂದು ಭಾಷಣ (ನಾಗಪುರ ಆಕಾಶವಾಣಿಗಾಗಿ) ಉಪನಿಷತ್ ರಹಸ್ಯ, ಗುರುದೇವ ಕಾನಡೆ, ಭಾರತೀಯ ನವಜನ್ಮ ಶ್ರೀ ಶ್ರೀ ಅರವಿಂದರು, ಶ್ರೀ ಅರವಿಂದರ ಯೋಗ, ಆಶ್ರಮ ಮತ್ತು ತತ್ತ್ವೋಪದೇಶ, ಗುರು ಗೋವಿಂದ ಸಿಂಗ, ನೂರೊಂದು ಕವನ, ಕಬೀರ ವಚನಾವಲಿ ಭಗ್ನ ಮೂರ್ತಿ ಮುಂತಾದವು.

**೨:೩:೪ ಬೇಂದ್ರೆ ಹಾಗೂ ಆಧ್ಯಾತ್ಮ**

ಬೇಂದ್ರೆಯವರು ಆಧ್ಯಾತ್ಮಕ್ಕೆ ತಮ್ಮ ಬದುಕಿನಲ್ಲಿ ಮೊದಲ ಪ್ರಾಶಸ್ತ್ಯವನ್ನು ನೀಡಿದ್ದರು. ತಮ್ಮ ಪ್ರತಿಯೊಂದು ಕಾರ್ಯವನ್ನು 'ಶ್ರೀ ಅರವಿಂದಾರ್ಪಣ' ಎಂಬ ಭಾವನೆಯಿಂದ ಮಾಡುತ್ತಿದ್ದರು. ದತ್ತಾತ್ರೇಯ ಮತ್ತು ವಿಠ್ಠಲರು ಬೇಂದ್ರೆ ಅವರಿಗೆ ಪರಮ ಪ್ರಿಯವಾದ ಇಷ್ಟ ದೇವತೆಗಳಾಗಿದ್ದರು.

ಬೇಂದ್ರೆ ಅವರು ಕೇವಲ ಸಾಹಿತ್ಯದ ಪ್ರಕಾರಗಳಲ್ಲಿ ಆಸಕ್ತಿ ಇದ್ದವರಲ್ಲ. ೧೯೭೬-೧೯೮೧ ಇದು ಬೇಂದ್ರೆ ಅವರ ಜೀವನದ ಕೊನೆಯ ಹಂತ ಏಕಂಸತ್, 'ಏಕಂ ಸಂಖ್ಯಾ', 'ಏಕೋ ದೇವಃ ಸರ್ವ ಭೂತೇಷು ಗೂಢಃ', ಏಕ ಏವ ಸಾಕ್ಷಿ ಸ್ವಪ್ರಕಾಶಃ ಮೊದಲಾದ ವಾಕ್ಯಗಳಿಂದ ಬೇಂದ್ರೆ ಅವರು ತಾರುಣ್ಯದಲ್ಲಿಯೇ ಆಕರ್ಷಿತರಾಗಿದ್ದರು. ಯಾವುದೇ ವಿಷಯದಲ್ಲಿ ಯಾವುದೇ ಸಂಖ್ಯೆ ಬಂದರೆ, ಅದನ್ನು ಕುರಿತು ಯೋಚಿಸುವುದು ಅವರ ಸ್ವಭಾವವಾಗಿತ್ತು. ವೇದ, ಉಪನಿಷತ್ತು, ವಿಶ್ವೋತ್ಪತ್ತಿ ಶಾಸ್ತ್ರ, ಭೌತ ವಿಜ್ಞಾನ ರಸಾಯನಶಾಸ್ತ್ರ, ಜೀವಶಾಸ್ತ್ರ, ಭೂರಚನಾಶಾಸ್ತ್ರ ಮೊದಲಾದವುಗಳಲ್ಲಿ ಒಂದೇ ಸಂಖ್ಯೆ, ಬೇಂದ್ರೆಯವರಿಗೆ ಆತ್ಮಾನಂದವಾಗುತ್ತಿತ್ತು. ಜ್ಞಾನ ಇರುವುದು ಸಂಖ್ಯೆಯಲ್ಲಿ ಎಂಬ ಶ್ರದ್ಧೆಯುಳ್ಳ ಅವರು, ತಮ್ಮ ಜೀವನದ ಕೊನೆಯ ಹಂತವನ್ನು ಸಂಖ್ಯಾ-ಸಂಖ್ಯಾ ಚಿಂತನಕ್ಕಾಗಿ ಮೀಸಲಾಗಿಟ್ಟಿದ್ದರು. ಸಾವಿರಾರು ಸಂಖ್ಯೆಗಳನ್ನು ಕೂಡಿಸಿ, ಕಳೆದು - ಗುಣಿಸಿ ಭಾಗಿಸಿ ಸಂಖ್ಯೆಗಳ ಗುಣಧರ್ಮಗಳ ಅಭ್ಯಾಸ ಮಾಡಿದರು. ತಾವು ಶೋಧ ಮಾಡಿದ

ಸಂಖ್ಯೆಗಳ ಚಕ್ರ, ಚಾಕು, ಕೋಷ್ಟಕ ಸಿದ್ಧಪಡಿಸಿದರು.

"Tata Institute of Fundamental Research ; Bombayಯಲ್ಲಿ ಒಂದು ಸಂಖ್ಯೆಯನ್ನು ಕಂಪ್ಯೂಟರಿಗೆ ಕೊಟ್ಟು ಆ ಸಂಖ್ಯೆ ಚಿಂತನೀಯ ಪ್ರಶ್ನೆಯೇ ಎಂದ ಕೇಳಿದರು ಅದು ಹೌದು ಎಂದು ಉತ್ತರ ಕೊಟ್ಟಿತು. ಧಾರವಾಡ, ಮುಂಬೈ, ಪುಣೆಯಲ್ಲಿರುವ ಗಣಿತ ಶಾಸ್ತ್ರಜ್ಞರೊಡನೆ ತಾವು ಕಂಡ ಸಂಖ್ಯಾ ಗಣಿತವನ್ನು ಕುರಿತು ಚರ್ಚೆ ಮಾಡಿದರು. ಪುಣೆಯಲ್ಲಿಯ ಭೌತ ವಿಜ್ಞಾನ ಮಂಡಲದ ಎದರು ತಮ್ಮ ಸಂಖ್ಯಾ ಶೋಧನೆಯನ್ನು ಮಂಡಿಸಿದರು." ೧೩

ಬೇಂದ್ರೆ ತಮ್ಮ ಜೀವನಾನುಭವಕ್ಕೆ ನಿಲುಕದ ಸಕಲವನ್ನೂ ಗ್ರಹಿಸಿ ಕಾವ್ಯ ಮುಖೇನ ಅಭಿವ್ಯಕ್ತಿಸಿದರು. ಅಷ್ಟು ಮಾತ್ರವಲ್ಲ "ಪ್ರತಿನಿತ್ಯದ ಜೀವನದ ಸಾಮಾನ್ಯ ಮಾತಿನಿಂದ ಮಾತನಾಡಲು ಪ್ರಾರಂಭಿಸಿ, ಭೌತ ವಿಜ್ಞಾನ, ರಸಾಯನಶಾಸ್ತ್ರ, ಭೂಗರ್ಭಶಾಸ್ತ್ರ, ಗಣಿತ, ಶರೀರಶಾಸ್ತ್ರ, ಜೋತಿಷ್ಯ ಮತ್ತು ಆಧ್ಯಾತ್ಮದವರೆಗೆ ಸುತ್ತಾಡಿಕೊಂಡು ಬರುವ ರೀತಿಯು ಎಂಥವರನ್ನೂ ದಿಗ್ಭ್ರಮೆಗೊಳಿಸುತ್ತದೆ" ೧೪

ಡಾ|| ಹೆಚ್. ನರಸಿಂಹಯ್ಯ (ಬೆ.ವಿ.ವಿ. ಬೆಂಗಳೂರು) ಮಾಜಿ ಉಪಕುಲಪತಿಗಳು "ಬೇಂದ್ರೆ ಅವರು ಮಾಡುತ್ತಿರುವ ಸಂಶೋಧನೆಗೆ ಒಂದು ನಿಶ್ಚಿತವಾದ ಪದ್ಧತಿ ಇದೆ. ಇವರ ಈ ವಿಜ್ಞಾನ ಸಂಶೋಧನೆಗೆ ರೂಪ ಬಂದು ಪ್ರಕಟವಾಗಬೇಕು" ೧೫ ಎಂದು ಅಪೇಕ್ಷೆಪಟ್ಟಿದ್ದರು.

**೨:೪ ಬೇಂದ್ರೆ ಸಾಹಿತ್ಯ ಸನ್ಮಾನ**

ಬೇಂದ್ರೆ ಅವರ ಸಾಹಿತ್ಯ ಸೇವೆಗೆ, ಸಾಧನೆಗೆ ಸಿಕ್ಕ ಸನ್ಮಾನ ಪ್ರಶಸ್ತಿ ಮರ್ಯಾದೆಗಳು ಬಹಳಷ್ಟು, ಮೈಸೂರಿನಲ್ಲಿ ನಡೆದ ಹತ್ತನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನದಲ್ಲಿ ಲೇಖಕರ ಗೋಷ್ಠಿಯ ಅಧ್ಯಕ್ಷತೆ (೧೯೩೦) ಮುಂಬೈನಲ್ಲಿ ಜರುಗಿದ ೨೧ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕವಿಗೋಷ್ಠಿ ಅಧ್ಯಕ್ಷತೆ, ಧಾರವಾಡದಲ್ಲಿ ೫೦ನೇ ಹುಟ್ಟು ಹಬ್ಬಾಚರಣೆ, ಮಹಾರಾಷ್ಟ್ರದವರು ೬೦ನೇ ಹುಟ್ಟು ಹಬ್ಬ ಆಚರಿಸಿದರು. ಸೊಲ್ಲಾಪುರ, ಪುಣೆ, ಧಾರವಾಡ, ಬೆಂಗಳೂರುಗಳಲ್ಲಿ ೬೦ನೇ ಹುಟ್ಟು ಹಬ್ಬವನ್ನು ಆಚರಿಸಿದರು. ಶಿರಹಟ್ಟಿಯವರು ೭೦ನೇ ಹುಟ್ಟು ಹಬ್ಬವನ್ನು ಆಚರಿಸಿದರು.

೧೯೫೬ರಲ್ಲಿ ಆಕಾಶವಾಣಿಯ ಧಾರವಾಡ ಕೇಂದ್ರದ ಸಾಹಿತ್ಯ ಸಲಹೆಗಾರರಾದರು. ಕನ್ನಡ ಸಾಹಿತ್ಯ ಪರಿಷತ್ತು, ಅವರ ಸಾಹಿತ್ಯ ಸಾಧನೆಗೆ ಸನ್ಮಾನ ಮಾಡಿತು. ೧೯೫೯ರಲ್ಲಿ 'ಅರಳು-ಮರಳು' ಕವನ ಸಂಕಲನದಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಿತು. ಮರಾಠಿಯ 'ಸಂವಾದ ಕೃತಿಗೆ' ಕೇಳಕರ ಪ್ರಶಸ್ತಿ ಬಂದಿತು. ೧೯೬೬ರಲ್ಲಿ ಮೈ.ವಿ.ವಿ.ಯ ಗೌರವ ಡಾಕ್ಟರೇಟ್, ಹೈದ್ರಾಬಾದಿನ ಹಿಂದಿ ಪ್ರಚಾರ ಸಭಾದ 'ಸಾಹಿತ್ಯ ಆಚಾರ್ಯ ಪ್ರಶಸ್ತಿ, ೧೯೬೮ ರಲ್ಲಿ ಪದ್ಮಶ್ರೀ ಪ್ರಶಸ್ತಿ, ಕ.ವಿ.ವಿ.ಯ ಗೌರವ ಡಾಕ್ಟರೇಟ್ - ೧೯೬೯ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಫೆಲೋಶಿಪ್ ಗೌರವ, ೧೯೭೨ರಲ್ಲಿ ಪರ್ಯಾಯದಲ್ಲಿ ಉಡುಪಿ ಮಠದ ವತಿಯಿಂದ 'ಕರ್ನಾಟಕ ಕವಿ ಕುಲತಿಲಕ' ಬಿರುದು ಸಿಕ್ಕಿತು. ೭೫ನೇ ಹುಟ್ಟು ಹಬ್ಬದ ಸವಿನೆನಪಿಗಾಗಿ 'ವರಕವಿ ಬೇಂದ್ರೆ' ರಾಜ್ಯ ಸರ್ಕಾರದ, ಸಾಕ್ಷಚಿತ್ರನಿರ್ಮಾಣ, ಖಲೀಲ್ ಗಿಬ್ರಾನ್ ಹಾಗೂ ಕೀಟ್ಸ್ ಕವಿಯ ಚತುರ್ಮುಖ ವಿಚಾರ ಧಾರೆಯ 'ನಾಕುತಂತಿ' ಕೃತಿಗೆ ಭಾರತದ ಅತ್ಯುನ್ನತ ಪ್ರಶಸ್ತಿ ಜ್ಞಾನಪೀಠ ಪ್ರಶಸ್ತಿ ೧೯೭೪ರಲ್ಲಿ ಲಭಿಸಿದೆ.

೧೯೭೬ ರಲ್ಲಿ ವಾರಣಾಸಿಯ ಕಾಶೀ ವಿದ್ಯಾಪೀಠದ ಗೌರವ ಡಾಕ್ಟರೇಟ್, ಇವೆಲ್ಲ ಅಧಿಕೃತವಾದ ಮಾನ-ಸನ್ಮಾನಗಳಾದರೆ ಬೇಂದ್ರೆ ಅವರ ಹೆಸರಿನಲ್ಲಿ ನಡೆದ ಸಭೆ, ವಿಚಾರ ವಿಮರ್ಶೆ, ಗೋಷ್ಠಿಗಳು ಲೆಕ್ಕಕ್ಕೆ

ಸಿಗಲಾರದಷ್ಟು ಸಾರ್ವಜನಿಕರಲ್ಲಿ ನಾನು ತುಂಬ ಯಶಸ್ವಿಯಾದನೆಂದೇ ಹೇಳಬೇಕು. ಅದು ನನ್ನ ಆತ್ಮ ವಿಶ್ವಾಸಕ್ಕೆ ಪುಟಕೊಟ್ಟಿರಬಹುದು" ೧೬ ಎಂದು ಸ್ವತಃ ಬೇಂದ್ರೆ ಅವರೇ, ಹೇಳಿಕೊಂಡಿದ್ದಾರೆ. ಕವಿ ಬೇಂದ್ರೆ ಸ್ವತಃ ಡಾಕ್ಟರೇಟ್ ಪಡೆಯದ್ದಿದ್ದರೂ ಅವರ ಸಾಹಿತ್ಯ ಸಂಶೋಧನೆಯಿಂದ ಕೆಲವರು ಡಾಕ್ಟರೇಟ್ ಗೌರವವನ್ನು ಪಡೆದುಕೊಂಡಿದ್ದಾರೆ.

ಬೇಂದ್ರೆಯವರು ಕನ್ನಡ ನಾಡು ನುಡಿಯನ್ನು ಗೌರವಿಸಿದಂತೆ ಕನ್ನಡದ ಕವಿಗಳನ್ನು ತನ್ನವರೆಂದೇ ಭಾವಿಸಿದ್ದವರು. ತಮ್ಮ ಬದುಕಿನಲ್ಲಿ ನಡೆದ ಪ್ರತೀ ಘಟನಾವಳಿಗಲನ್ನು ದಿನಾಂಕ ಸಹಿತ ನಮೂದಿಸಿ ದಾಖಲಾಗಿರಿಸಿದ್ದೆ ಬೇಂದ್ರೆಯವರನ್ನು ಕುರಿತು ಅವರ ಮಗ ಡಾ|| ವಾಮನ ಬೇಂದ್ರೆ ಒಲವೆ ನಮ್ಮ ಬದುಕು-ಸಮಗ್ರ ಒಲವಿನ ಗೀತ ಸಂಕಲನದ ಬೇಂದ್ರೆ ಜೀವನ ಪರಿಚಯದಲ್ಲಿ ಹೀಗೇ ಹೇಳುತ್ತಾರೆ.

"೧೯೫೬-೬೦ ಹುಟ್ಟುಹಬ್ಬ, ಧಾರವಾಡ ಆಕಾಶವಾಣಿ ಸಾಹಿತ್ಯ ಸಲಹಾಕಾರ ಮಗ ಪಾಂಡುರಂಗನ ವಿವಾಹ ಡಾ|| ಕುವೆಂಪು ಅವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೭:ಅರಳು-ಮರಳು ಪ್ರಕಟಗೊಂಡದ್ದು. ಡಾ|| ರಂ.ಶ್ರೀ ಮುಗಳಿಯವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೮: ಸಾಹಿತ್ಯ ಅಕಾಡೆಮಿ ಬಹುಮಾನ ಯಾರಿಗೂ ಸಿಗಲಿಲ್ಲ.

೧೯೫೮-೫೯: ಅರಳು - ಮರಳು ಸಂಗ್ರಹಕ್ಕೆ ಸಾಹಿತ್ಯ ಅಕಾಡೆಮಿ ಬಹುಮಾನ ಧರ್ಮಸ್ಥಳಕ್ಕೆ ಹೋದದ್ದು-ನಮನ ಸಂಚಯ ಪ್ರಕಟಗೊಂಡದ್ದು.

೧೯೬೦ ಡಾ|| ಕಾರಂತರಿಗೆ ಬಹುಮಾನ.

೧೯೬೧ ಡಾ|| ಗೋಕಾಕರಿಗೆ ಬಹುಮಾನ.

ಇಲ್ಲಿಯವರೆಗಿನ ಜೀವನ ಘಟನಾವಳಿಗಳನ್ನು ದ.ರಾ. ಬೇಂದ್ರೆ ಅವರು ತಮ್ಮ ಆತ್ಮ ಚರಿತ್ರೆಗೆ ಅನುಬಂಧವಾಗಿ ಪ್ರಕಟಿಸಿದ್ದು ನಡೆದಿ ಬಂದ ದಾರಿ ನಂ. ೩ರಲ್ಲಿ ಇದಕ್ಕೆ ಐತಿಹಾಸಿಕ ಮಹತ್ವವಿದೆ. ತಮ್ಮ ಸ್ನೇಹಿತರಿಗೆ ಸಿಕ್ಕ ಬಹುಮಾನ ಅಥವಾ ಅವರ ಜೀವನ ಘಟನೆಗಳು ತಮ್ಮ ಜೀವನದ ಪ್ರಮುಖ ಘಟನೆ ಎಂಬುದಾಗಿ ಬೇಂದ್ರೆ ಭಾವಿಸಿದ್ದು ಅನುಕರಣೀಯ ನಿಲುವು ಆಗಿದೆ. ಸಾಹಿತಿ - ಸಾಹಿತಿ - ಸ್ನೇಹ ಸಂಬಂಧವೇ ಸಂಸ್ಕೃತಿ " ೧೭

ತಮ್ಮ ಸಾಹಿತ್ಯದ ಮೂಲಕ ಸಾಮಾಜಿಕ ಕಳಕಳಿಯನ್ನು ಮೆರೆದ ಬೇಂದ್ರೆ ವೈಯಕ್ತಿಕ ಬದುಕಿನಲ್ಲಿ ಇದನ್ನು ರೂಢಿಸಿಕೊಂಡಿದ್ದವರು. ಸೊಲ್ಲಾಪುರದಲ್ಲಿನ ಎಲ್ಲ ಸಾರ್ವಜನಿಕರೊಂದಿಗೆ ಸಂಪರ್ಕ ಸಾಧಿಸಿ, ಯಾವುದೇ ಸಮಾಜದವರು ಭಾಷಣಕ್ಕೆ ಕರೆದರೆ ಅಲ್ಲಿ ಹೋಗಿ ಬರುತ್ತಿದ್ದರು. ಈ ಕುರಿತು ವಾಮನ ಬೇಂದ್ರೆಯವರು ತಮ್ಮ ಕೃತಿ ಬೇಂದ್ರೆ ಕೃತಿ ಪರಿಚಯದಲ್ಲಿ ಹೀಗೆ ನೆನಪಿಸಿಕೊಳ್ಳುತ್ತಾರೆ. "ಹೊಲೆಯರ ಸಮಾಜದ ಕೆಲವು ಚಿತ್ರಕಾರರು ಬೇಂದ್ರೆಯವರನ್ನು ಭಾಷಣಕ್ಕಾಗಿ ಆಮಂತ್ರಿಸಲು ಬಂದರು. ಬೇಂದ್ರೆಯವರು ಆಮಂತ್ರಣ ಒಪ್ಪಿಕೊಂಡರು. ಆದರೂ ಮೂರು ಕರಾರುಹಾಕಿದರು. ಅವು ಹೀಗಿವೆ. ೧. ಚಿತ್ರಕಾರರು ತಮ್ಮ ಮನೆಯ ಗುಡಿಸಲಿನಲ್ಲಿಯ ನಿತ್ಯ ಜೀವನದ ಚಿತ್ರಗಳನ್ನೇ ಹೆಚ್ಚಾಗಿ ಪ್ರದರ್ಶನದಲ್ಲಿರಿಸಬೇಕು. ೨. ಚಿತ್ರಕಾರರು ಪರಸ್ಪರರಲ್ಲಿ ಅಸೂಯೆ ತಾಳದೆ. ತಾಯಿಯ ಹೆಸರಿನಿಂದ ಕಟ್ಟೆಚ್ಚರಗಳ ಉಚ್ಚಾರ ಮಾಡಬಾರದು. ೩. ತಮ್ಮ ಕೇರಿಯಲ್ಲಿ ಸಿಕ್ಕ ಸಿಕ್ಕಲ್ಲಿ ಉಗಳಬಾರದು ಈ ಮೂರು ಕರಾರಿಗೆ ಒಪ್ಪಿದರೆ ತಾವು ಹೊಲಗೇರಿಗೆ ಚಿತ್ರ

ಪ್ರದರ್ಶನದ ಉದ್ಘಾಟನೆಗೆ ಬರುವುದಾಗಿ ಹೇಳಿದರು. ಚಿತ್ರಕಾರರು ಒಪ್ಪಿದರು. ಇದರ ಪರಿಣಾಮ ಆ ಚಿತ್ರಕಾರರ ಜೀವನಕ್ಕೆ ಒಂದು ಹೊಸ ರೂಪ ಸಿಕ್ಕಿತು". ೧೮ ಬದುಕಿನಲ್ಲಿ ಸಾಧಿಸಲಾಗುವುದನ್ನು ಮಾತ್ರ ಸಾಹಿತ್ಯದಲ್ಲಿ ಸಾಧಿಸಲು ಸಾಧ್ಯ ಎನ್ನುವುದು ಬೇಂದ್ರೆಯವರ ನಂಬುಗೆ ಆಗಿತ್ತು.

ಬೇಂದ್ರೆ ಕನ್ನಡ ನವೋದಯ ಸಾಹಿತ್ಯದ ಮೊದಲ ಸಾಲಿನ ಚಿಂತಕರಲ್ಲಿ ಒಬ್ಬರಾಗಿದ್ದಾರೆ. ತಮ್ಮ ಅಮೂಲ್ಯ ಪ್ರತಿಭೆ ಹಾಗೂ ಅಸೀಮ ಅಭಿವ್ಯಕ್ತಿ ಸಾಮರ್ಥ್ಯಗಳಿಂದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಎಣೆಯಿಲ್ಲದ ಸಾಧನೆ ಮಾಡಿದ್ದಾರೆ. ತಮ್ಮ ಜೀವನದ ಸಿದ್ಧಾಂತ ಹಾಗೂ ಸಾಹಿತ್ಯ ಸಿದ್ಧಾಂತ ಎರಡೂ ಒಂದೇ ಎಂದು ಬಾಳಿದ ಬೇಂದ್ರೆ ೭೬ನೇ ವಯಸ್ಸಿನಲ್ಲಿ ಗ್ಲಾಡ್ ಬ್ಲ್ಯಾಡರ್‌ನ ಶಸ್ತ್ರ ಚಿಕಿತ್ಸೆಯ ನಂತರ ೨೬೧೦-೧೯೮೧ ರಂದು ಹರ್‌ಕಿಶನ್‌ದಾಸ ಆಸ್ಪತ್ರೆಯಲ್ಲಿ ತೀರಿಕೊಂಡರು. ಆಸ್ಪತ್ರೆಯಲ್ಲಿದ್ದಾಗ ಮಗ ವಾಮನ ಬೇಂದ್ರೆಯೊಂದಿಗೆ "೧೯೮೬ರಲ್ಲಿ ಕಾಣಲಿರುವ ಧೂಮಕೇತು - Comet ಬಗ್ಗೆ ಚರ್ಚಿಸಿದರು. ೭೬ವರ್ಷಕ್ಕೆ ಒಮ್ಮೆ ಕಾಣುವ ಈ ಧೂಮಕೇತುವಿನ ಬಗ್ಗೆ ಒಳ್ಳೆಯ ಪುಸ್ತಕ ಕೊಂಡುಕೊಳ್ಳೋಣ ಎಂದು ತಿಳಿಸಿದರು. Astronomy - Edited by John paton publisher apiccologact book, 1981 ಪುಸ್ತಕ ಕೊಂಡು ಮಗ ತೋರಿದಾಗ ಬೇಂದ್ರೆ ಕುಷಿ ಪಟ್ಟ ವಿಷಯವನ್ನು ವಾಮನ ಬೇಂದ್ರೆಯವರು ನೆನಪಿಸಿಕೊಳ್ಳುತ್ತಾರೆ." ೧೯. ಬೇಂದ್ರೆ ಅವರ ಪುಸ್ತಕ ಪ್ರೀತಿಯನ್ನು ವಿಶಾಖ ಬೇಂದ್ರೆಯವರು ಹೀಗೆ ಜ್ಞಾಪಿಸಿಕೊಳ್ಳುತ್ತಾರೆ. "ನಮ್ಮ ಮನೆಯಲ್ಲಿರುವ ಗ್ರಂಥ ಸಂಗ್ರಹವು ಒಂದು ವಿದ್ಯಾಲಯದ ಗ್ರಂಥಾಲಯದಷ್ಟಿದೆ. ಗ್ರಂಥ-ದ.ರಾ. ಬೇಂದ್ರೆಯೆಂದು ಸಮೀಕರಣ ಮಾಡಿದರೆ ತಪ್ಪಾಗಲಾರದು. ನಾನೊಮ್ಮೆ ಇಷ್ಟು ಪುಸ್ತಕಗಳನ್ನು ಏಕೆ ಸಂಗ್ರಹಿಸಿದಿರಿ ಎಂದು ಕೇಳಿದಾಗ ಅವರು ತಮ್ಮ ಜೀವನವನ್ನು ಸಂಕ್ಷಿಪ್ತವಾಗಿ ಹೇಳಿದರು. ಜೀವನದಲ್ಲಿ ಬಡತನ ಕಷ್ಟ-ನಷ್ಟ ಎಲ್ಲವೂ ಬಂದವು ಹೋದವು ಆದರೆ ಈ ಪುಸ್ತಕ ಮತ್ತು ಗೆಳೆಯರು ನನ್ನನ್ನು ಎಂದೂ ಬಿಡಲಿಲ್ಲ. ಬಡತನದಲ್ಲಿ ಸಹಾಯಮಾಡಿದ್ದಾರೆ. ಕಷ್ಟ-ನಷ್ಟಗಳಲ್ಲಿ ನೆರವಾಗಿದ್ದಾರೆ. ೫೦ನೇ ಹುಟ್ಟುಹಬ್ಬವನ್ನು ಸಾಹಿತ್ಯ ಪ್ರೇಮಿಗಳು ಆಚರಿಸಿ ಹತ್ತು ಸಾವಿರ ರೂಪಾಯಿ ಸಂಗ್ರಹಿಸಿಕೊಟ್ಟಿದ್ದರು. ಆ ಹಣವನ್ನು ನಾನು ತಿಂದು ಹಾಕಲಿಲ್ಲ. ಅದೇ ರೀತಿ ನಾನು ಗಳಿಸಿದ ಹಣದಲ್ಲಿಯೂ ಹೆಚ್ಚು ಪಾಲು ಗ್ರಂಥಗಳನ್ನು ಕೊಳ್ಳುವುದಕ್ಕಾಗಿ ವಿನಿಯೋಗಿಸಿದ್ದೇನೆ. ಎಂದು ಹೇಳಿ ಕೆಲವು ಮಹತ್ವದ ಗ್ರಂಥಗಳನ್ನು ತೋರಿಸಿ ಅದರಲ್ಲಿಯ ವಿಷಯಗಳನ್ನು ತಿಳಿಸಿಕೊಡಲಾರಂಭಿಸಿದರು."೨೦

ಪುಸ್ತಕ ಪ್ರೀತಿಯನ್ನು ಹೊಂದಿದ್ದ ಬೇಂದ್ರೆ ಬದುಕು ಸಾಹಿತ್ಯಕ್ಕಿಂತ ದೊಡ್ಡದು ಎಂದು ನಂಬಿದ್ದರು. ಬದುಕು ಹಾಗೂ ಸಾಹಿತ್ಯದಲ್ಲಿ ಮೆಚ್ಚುವ ಹಾಗೆ ಬದುಕಿದರು. ಇಂದಿಗೂ ಬೇಂದ್ರೆ ಸಾಹಿತ್ಯದ ನವ ವಿಚಾರಗಳು ನವೋದಯ, ಪ್ರಗತಿಶೀಲ, ನವ್ಯ ದಲಿತ ಬಂಡಾಯದ ನಂತರವೂ ಅಧ್ಯಯನ ಯೋಗ್ಯವಾಗಿಯೇ ಉಳಿದಿವೆ. ಆರು ದಶಕಕ್ಕೂ ಮೀರಿದ ಸಾಹಿತ್ಯ ಬದುಕು, ವೈವಿಧ್ಯತೆಯಲ್ಲೇ ಅನನ್ಯತೆಯನ್ನು ಕಂಡವರು.

## ಅಡಿಟಿಪ್ಪಣಿ

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧)ಗಿರಡ್ಡಿ ಗೋವಿಂದರಾಜ (ಸಂ) | ಕನ್ನಡ ನವೋದಯ ಕಾವ್ಯ ಮಂಗಳೂರು ಕೇಂದ್ರ | ಕ. ಸಾಹಿತ್ಯ ಅಕೆಡೆಮಿ, ಬೆಂಗಳೂರು - ೨೦೦೧ (ಪು.೫೧) |
| ೨)ಕುಲಕರ್ಣಿ ಎನ್ಕೆ.(ಕುಮಾರ ಚಲ್ಯ) | ದ.ರಾ. ಬೇಂದ್ರೆ | ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್- ೨೦೦೧ |
| ೩)ಅದೇ | | (ಪು.-೨೦) |
| ೪)ಮಂಗಳಾ ಪ್ರಿಯದರ್ಶಿನಿ | ಬೇಂದ್ರೆ | (ಪು.-೨೧) |
| ೫)ವಾಮನ ಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಕ.ಸಾ. ಅಕಾಡೆಮಿ, ಬೆಂಗಳೂರು ೨೦೦೩ (ಪು.-೩) |
| ೬)ಮಂಗಳಾ ಪ್ರಿಯದರ್ಶಿನಿ | ಬೇಂದ್ರೆ | ಶ್ರೀ ಮಾತಾ ಪ್ರಕಾಶನ ಹುಬ್ಬಳ್ಳಿ - ೧೯೭೮ (ಪು.-೧೦೯) |
| ೭)ಅದೇ | | ಕ.ಸಾ. ಅಕಾಡೆಮಿ, ಬೆಂಗಳೂರು ೨೦೦೩ (ಪು.-೧೩,೧೪) |
| ೮)ವಾಮನ ಬೇಂದ್ರೆ (ಸಂ) | ಅಂಬಿಕಾತನಯ ದತ್ತರ | (ಪು.-೧೫) |
| ೯)ಅದೇ | ಸಮಗ್ರ ಕಾವ್ಯ ವಿಕಾಸ ಸಂ. ೩ | ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩ (ಪು.೩೦೪) |
| ೧೦)ವಾಮನ ಬೇದ್ರೆ (ಸಂ) | ಅಂಬಿಕಾತನಯ ದತ್ತರ | (ಪು.-೨೪೭) |
| | ಸಮಗ್ರ ಕಾವ್ಯ ನಮನ ಸಂ. ೧ | ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩ (ಪು.೪೨೩, ೪೨೭) |
| ೧೧)ನಾಗರಾಜ್ ಡಿ.ಆರ್. | ಶಕ್ತಿ ಶಾರದೆಯ ಮೇಳ | ಅಕ್ಷರ ಪ್ರಕಾಶನ, ಸಾಗರ - 1987 (ಪು.೧೫) |
| ೧೨)ವಾಮನ ಬೇಂದ್ರೆ (ಸಂ) | ಅಂಬಿಕಾತನಯ ದತ್ತರ ಸಮಗ್ರ ಕಾವ್ಯ ದರ್ಶನ ಸಂ. ೨ | ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩ (ಪು.೧೯೭) |
| ೧೩)ವಾಮನ ಬೇಂದ್ರೆ (ಸಂ) | ಬೇಂದ್ರೆ ಜೀವನ ಪರಿಚಯ | ಶ್ರೀಮಾತಾ ಪ್ರಕಾಶನ, ಧಾರವಾಡ ೧೯೯೦ (ಪು.೯೪) |
| ೧೪) ಅದೇ | | (ಪು.೬೪,೬೫) |
| ೧೫) ಅದೇ | | (ಪು.೮೪) |
| ೧೬) ಅದೇ | | (ಪು.೯೫) |
| ೧೭) ಅದೇ | | (ಪು.೧೦೭) |
| ೧೮)ವಾಮನ ಬೇಂದ್ರೆ | ಒಲವೆ ನಮ್ಮ ಬದುಕು, | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ, (ಪು.೨೬೫) |
| ೧೯)ವಾಮನ ಬೇಂದ್ರೆ (ಸಂ) | ಬೇಂದ್ರೆ ಜೀವನ ಪರಿಚಯ | ಶ್ರೀಮಾತಾ ಪ್ರಕಾಶನ, ಧಾರವಾಡ- ೧೯೯೦, (ಪು.೪೨-೪೩) |
| ೨೦)ವಾಮನ ಬೇಂದ್ರೆ | ಬೇಂದ್ರೆ ಜೀವನ ಪರಿಚಯ | ಶ್ರೀಮಾತಾ ಪ್ರಕಾಶನ, ಧಾರವಾಡ, (ಪು.೯೯) |

ಅಧ್ಯಾಯ ೩

# ಬೇಂದ್ರೆಯವರ ಕಾವ್ಯಗಳು

ಬೇಂದ್ರೆಯವರು ತಮ್ಮ 'ನಾಕುತಂತಿ' ಕವನ ಸಂಕಲನಕ್ಕೆ ಜ್ಞಾನಪೀಠ ಪ್ರಶಸ್ತಿ ಪಡೆದವರು. ರೊಮ್ಯಾಂಟಿಕ್ ಕಾವ್ಯ ಪ್ರಭಾವ ಹಾಗೂ ದೇಶಿ ಸಂಸ್ಕೃತಿಯ ಸಮನ್ವಯದೊಂದಿಗೆ ಮೂಡಿ ಬಂದ 'ನವೋದಯ ಪಂಥ' ದ ಸಂದರ್ಭದಲ್ಲಿ ಭಾಷಾಶೈಲಿ ಎಲ್ಲರಿಗೂ ಆಯ್ಕೆಯ ಸವಾಲಾಗಿತ್ತು. ಬಿ.ಎಂ.ಶ್ರೀ, ಗೋವಿಂದ ಪೈ, ರಂ. ಶ್ರೀ ಮುಗಳಿ, ಗೋಕಾಕ್, ಪುತಿನರಂತಹ ಕವಿಗಳು ಸಂಸ್ಕೃತದ ಪ್ರಭಾವಕ್ಕೆ ಮಣಿಯದ ಸುಶಿಕ್ಷಿತ ಆಧುನಿಕ ಭಾಷಾಶೈಲಿಯ ಕಡೆಗೆ ಗಮನವಿತ್ತರು.

ಕುವೆಂಪು, ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಮಿಶ್ರಿತವಾದ ಧಾಟಿಯನ್ನು ತಮ್ಮ ಕಾವ್ಯಶೈಲಿಯನ್ನಾಗಿಸಿಕೊಂಡರು. ಉತ್ತರ ಕರ್ನಾಟಕದ ದೇಶಿ ಶೈಲಿಯ ಭಾಷೆ ಬೇಂದ್ರೆ ಅವರ ಕಾವ್ಯಶಕ್ತಿಯಾಯಿತು. ಶಿಷ್ಟ ಸಂಪ್ರದಾಯದ ವೈದಿಕ ಪರಂಪರೆಯ ಹಿನ್ನೆಲೆಯ ಕವಿ ಬೇಂದ್ರೆ ಅಚ್ಚ ಧಾರವಾಡದ ಮಣ್ಣಿನ ಶೈಲಿಯನ್ನೇ ಕಟ್ಟಿ ಬೆಳೆಸಿದರು. ಅವರ ಕಾವ್ಯ ಭಾಷೆ ದೇಶೀ ಸತ್ವ ಹಾಗೂ ದೇಶಿಶಕ್ತಿಗಳನ್ನು ಹೊಂದಿಕೊಂಡು ಪುಷ್ಟವಾಯಿತು. "ಬೇಂದ್ರೆ ಅವರು ವೇದ ಪಂಡಿತರ ಮನೆತಕ್ಕೆ ಸೇರಿದವರಾದರೂ, ಅವರ ಕಿವಿಯ ಮೇಲೆ ಬಿದ್ದಿದ್ದು ಹಾಡುಗಳೇ ವಿನಃ ಮಂತ್ರಗಳಲ್ಲ"೧. ಮನೆಯಲ್ಲಿ ತಾಯಿಯ ಬಾಯಿಂದ ಹೊರ ಸೂಸುತ್ತಿದ್ದ ಉದಯರಾಗದ ಭಕ್ತಿಗೀತೆಗಳು, ಸಂಪ್ರದಾಯದ ಹಾಡುಗಳು, ದಾಸರ ಕೀರ್ತನೆಗಳು, ಮರಾಠಿ ಸಂತರ ವಚನಗಳು, ಅಭಂಗಗಳು, ಅಂಬಿಕಾತನಯದತ್ತರ ಕಾವ್ಯಾಸಕ್ತಿಯನ್ನು ಹಿಗ್ಗಿಸಿತು.

ವಿದ್ಯಾರ್ಥಿ ದೆಸೆಯಲ್ಲಿ ಗ್ರಂಥಾಲಯಕ್ಕೆ ಹೋಗಿ ಕೈಗಡ ತಂದು ಓದುತ್ತಿದ್ದ ಹವ್ಯಾಸ ಅವರ ಸಾಹಿತ್ಯಾಸಕ್ತಿಗೆ ಪೂರಕವೂ, ಪೋಷಕವೂ ಆಯಿತು. ವ್ಯಾಸಂಗದ ಸಂದರ್ಭದಲ್ಲಿನ ಇಂಗ್ಲೀಷ್, ಸಂಸ್ಕೃತ ನಾಟಕಗಳು, ಪುಣೆಯಲ್ಲಿನ ಶಾರದಮಂಡಳಿ, ಮರಾಠಿ ಕವಿಗಳ ಹವ್ಯಾಸದಿಂದಾದ ಭಾರತೀಯ ಮಹಾನ್ ಸಾಧಕರ ಪರಿಚಯ, ಬದುಕಿನ ಬಡತನ, ಭಾರತದ ರಾಜಕೀಯ ಪರಿಸ್ಥಿತಿ ಇವೆಲ್ಲಕ್ಕೂ ಮೀರಿದ ಅಜ್ಜಿ ತಾಯಿಯರ ಪೋಷಣೆ ಅವರ ಸಾಹಿತ್ಯದ ಮೂಲ ಪ್ರೇರಣೆಯಾಯಿತು. ಬೇಂದ್ರೆ ತಮ್ಮ ಮೊದಲ ಕಾವ್ಯವನ್ನು ಮರಾಠಿ ಭಾಷೆಯಲ್ಲಿ ರಚಿಸಿದರು. ಸುಮಾರು ಆರು ದಶಕಕ್ಕೂ ಮೀರಿದ ತಮ್ಮ ಸಾಹಿತ್ಯ ಬದುಕಿನಲ್ಲಿ ವೈವಿಧ್ಯಮಯ ಪ್ರಕಾರಗಳಲ್ಲಿ ಆಸಕ್ತಿ ತೋರಿದ್ದರು.

ಬೇಂದ್ರೆ ಅವರು ಸುಮಾರು ೩೫ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವರ ಕಾವ್ಯಗಳಲ್ಲಿನ ವಿವಿಧ ವಸ್ತುಗಳನ್ನಾಧರಿಸಿ ಕೆಲವು ಪ್ರಾತಿನಿಧಿಕ ಕವನಗಳನ್ನು ಗುಂಪಿನಲ್ಲಿ ಗುರುತಿಸಲೂ ಪ್ರಯತ್ನಿಸಲಾಗಿದೆ. ಬೇಂದ್ರೆ ಅವರ ಪಾಲಿಗೆ ಕಾವ್ಯವೆಂದರೆ "ಪಟ್ಟಪಾಡನ್ನು ಹಾಡಾಗಿಸುವ ಕ್ರಿಯೆ" ಆ ಕ್ರಿಯೆಗೆ "ಹೂತ ಹುಣಸಿ ಮರ ಸಾಕು"

## ೩.೧ ಪ್ರಕೃತಿ ಕಾವ್ಯಗಳು

ನವೋದಯ ಕವಿಗಳು ಪ್ರಕೃತಿಯನ್ನು ಪಾಶ್ಚಾತ್ಯ ಹಿನ್ನೆಲೆಯಲ್ಲಿ ನೋಡಿದರೂ, ಭಾರತೀಯರಿಗೆ ಪ್ರಕೃತಿ ಪೂಜೆ ಹೊಸತೇನಲ್ಲ. ಐರೀಷ್ ಕವಿ ಎ.ಇ., ವರ್ಡ್ಸ್‌ವರ್ತ್, ಕುಮಾರವ್ಯಾಸರು ಇವರ ಪ್ರಕೃತಿ ಆಸೆಗೆ ನೀರೆರೆದರು. ಪ್ರಕೃತಿ ಬೇಂದ್ರೆ ಅವರಿಗೆ ಪ್ರತ್ಯೇಕ ಘಟಕವಲ್ಲ. ಮನುಷ್ಯನಿಗೂ, ಪ್ರಕೃತಿಗೂ ಅನನ್ಯ ಸಂಬಂಧವಿದೆ. ಇವರ ಕಾವ್ಯಗಳಲ್ಲಿ ಪ್ರಕೃತಿ ವ್ಯಕ್ತಿಯಾಗಿ, ಶಕ್ತಿಯಾಗಿ, ಚೈತನ್ಯದ ಝರಿಯಾಗಿ

ಋತುವರ್ಣನೆಗೆ ಮೂಲವಾಗಿದೆ. ಬೇಂದ್ರೆ ಪ್ರಕೃತಿಯಲ್ಲಿ ಭಗವತಿಯ ಸಾಕ್ಷಾತ್ಕಾರವನ್ನು ನೋಡಿದ್ದಾರೆ. 'ಗರಿ' ಕವನ ಸಂಕಲನದ ಮೊದಲ ಕವನ, 'ಬೆಳಗು', ಸೂರ್ಯನ ಹುಟ್ಟನ್ನು ವಿವರಿಸುತ್ತಾ ಪಂಚೇಂದ್ರಿಯಗಳ ಸಂವೇದನೆಗೆ ಬಂದ ಬೆಳಗನ್ನು ಗಿಡ-ಘಂಟೆ, ಹಕ್ಕಿ-ಹೂವು, ಎಲೆ-ಮೊಗ್ಗು-ಗಂಧ-ಗಾಳಿಯ ಮೂಲಕ ಅನುಭವಕ್ಕೆ ತರುತ್ತಾರೆ. ಬೆಳಕು ಕತ್ತಲೆ ಕಳೆದು ಜ್ಞಾನವನ್ನು ನೀಡುವ ಸಾಧನ. ಭೂಮಿಯ ಜಡತೆ ಮಾಯವಾಗಿ ಜೀವಚೈತನ್ಯ ಹರಿಯುತ್ತದೆ. ಬೆಳಗು ಎನ್ನುವುದು ಭೂಮಿಗೆ ಮನುಕುಲಕ್ಕೆ ಸಂಭವಿಸಿದ ದಿವ್ಯ ವಿಕಾಸ. ಆದ್ದರಿಂದಲೇ ಜಗವನ್ನೆಲ್ಲಾ ತನ್ನ ಬೆಳಕಿನಿಂದ ತೋಯಿಸುತ್ತಾನೆ. ಪ್ರಕೃತಿ ಪ್ರೀತಿಯ ಸರ್ವವ್ಯಾಪಕತೆಯನ್ನು ಬೆಳಗಿನ ಮೂಲಕ ಪ್ರಕಟಿಸುತ್ತಾರೆ. 'ಇದು ಬರಿ ಬೆಳಗಲ್ಲೋ ಅಣ್ಣ'ಎನ್ನುವ ಬೇಂದ್ರೆ, ಪ್ರಕೃತಿಯು ನಮ್ಮ ಜ್ಞಾನದ ಗ್ರಹಿಕೆಗೆ ಮೀರಿದ ಅಗಾಧ ನಿಗೂಡತೆ ದೈವತ್ವವನ್ನು ಹೊಂದಿದೆ ಎಂಬುದನ್ನು ಸೂಚಿಸುತ್ತಾರೆ.

ಸಖೀಗೀತ, ನಾದಲೀಲೆ, ಹಾಡು-ಪಾಡು, ಗಂಗಾವತರಣ, ಸೂರ್ಯಪಾನ, ಮತ್ತೆ ಬಂತು ಶ್ರಾವಣ ಈ ಎಲ್ಲ ಸಂಕಲನದಲ್ಲೂ ಶ್ರಾವಣ ಗೀತೆಗಳಿವೆ. 'ಶ್ರಾವಣ ಪ್ರತಿಭೆ' ಎಂದೇ ಗುರುತಿಸಲ್ಪಟ್ಟ ಕವಿ ಬೇಂದ್ರೆಗೆ ಪ್ರತಿವರ್ಷದ ಶ್ರಾವಣ, ಕಾವ್ಯದ ಹುಟ್ಟಿಗೆ ಕಾರಣವಾಗುವ ಸ್ಫೂರ್ತಿಯಾಗುತ್ತದೆ. ಶ್ರಾವಣ, ಶ್ರಾವಣ ವೈಭವ, ಮತ್ತೆ ಶ್ರಾವಣ ಬಂದ, ಶ್ರಾವಣ ಹಗಲು, ನಾದಲೀಲೆ ಸಂಕಲನದ ಶ್ರಾವಣ, ಬಾಹತ್ತರ ಸಂಕಲನದ ಶ್ರಾವಣ, ಹಾಡುಪಾಡಿನ ಶ್ರಾವಣ, ಬಂದಿಕಾರ ಶ್ರಾವಣ, ಪ್ರತಿ ವರ್ಷದಂತೆ ಬಂತು ಶ್ರಾವಣ ಹೀಗೆ ಶ್ರಾವಣ ಕವಿಯ ದಿನಮಾನದ ಉಸಿರಾಗಿದೆ.

"ನನ್ನ ಬಾಳುವೆಯಹುದು ಶ್ರಾವಣದ ಹಗಲು
ತನ್ನ ಹೊಯ್ದಾಟದಲ್ಲಿ ಅದಕ್ಕಿಂತ ಮಿಗಿಲು"೨

ಎಂದು ಕವಿ ತನ್ನ ಜೀವನಕ್ಕೂ ಶ್ರಾವಣಕ್ಕೂ ಇರುವ ನಂಟನ್ನು ಸೂಚಿಸುತ್ತಾರೆ. ಶ್ರಾವಣ ಕವಿಯ ಕಣ್ಣಿಗೆ ವಿಶಿಷ್ಟ ರೂಪಗಳಲ್ಲಿ ಕಾಣಿಸಿಕೊಂಡಿದೆ. 'ತರಳ ನೀನು ಶ್ರಾವಣ' ತುಂಟ ಹುಡುಗ ಶ್ರಾವಣ ; ಬಾರೋ ಮಗುವೆ ಶ್ರಾವಣ ಎಂದೆಲ್ಲಾ ಶ್ರಾವಣವನ್ನು ಕರೆದು ಮುದ್ದು ಮಾಡುತ್ತಾರೆ. ಇಲ್ಲಿ ಪ್ರಕೃತಿಯ ವ್ಯಕ್ತೀಕರಣ ನಡೆದಿದೆ. ಶ್ರಾವಣ ಮಾಸ ಭೂಮಿ, ಆಕಾಶ, ಮನೆ, ಮನ ಇವುಗಳ ಮೇಲೆ ಮಾಡುವ ಪರಿಣಾಮವನ್ನು 'ಶ್ರಾವಣ ಬಂತು ಕಾಡಿಗೆ' ಕವನದಲ್ಲಿ ಚಿತ್ರಿಸಿದ್ದಾರೆ.

ಹಸಿರುಟ್ಟ ಬಸುರಿಯ ಹಾಂಗ
ನೆಲ - ಹೊಲಾ ಹ್ಯಾಂಗ
ಅರಿಸಿಣ ಒಡೆಧಾಂಗ
ಹೊಮ್ಮುತಾವ! ಬಂಗಾರ ಚಿಮ್ಮುತಾವ,೩

ಎನ್ನುತ್ತಾ ಶ್ರಾವಣ ಸಿರಿ ಹೊತ್ತ ಹೆಣ್ಣನ್ನು ಕಾಣುತ್ತಾರೆ. ಶ್ರೀ ಕೃಷ್ಣನ ಜನನ, ಶ್ರೀ ಅರವಿಂದರ ಜನನ ಭಾರತಕ್ಕೆ ಸಿಕ್ಕ ಸ್ವಾತಂತ್ರ್ಯ ಪೂರ್ವಜರ ನೆನಪು, ಪ್ರೀತಿ, ಚಿಂತೆ, ದುಃಖಗಳೆಲ್ಲವೂ ಶ್ರಾವಣದ ಒಡನಾಡಿ ಎಂದು ಕವಿ ಸ್ಮರಿಸಿಕೊಳ್ಳುತ್ತಾರೆ. ಜಾನಪದ ಗೀತೆಗಳ ಧಾಟಿಯನ್ನು ಬಳಸಿಕೊಂಡು 'ಶ್ರಾವಣ' ಕವಿಯ ಕಾವ್ಯದ ಕುಣಿತವನ್ನು ಅನುಭವಿಸುವುದೇ ಚುದ ! ವರುಷಕ್ಕೊಮ್ಮೆ ಬರುವ ನವ ಯುಗಾದಿಯ ಸಂಭ್ರಮ, ಸೂರ್ಯೋದಯ, ಸೂರ್ಯಾಸ್ತಮ, ನಸುಕು, ಹೊತ್ತು, ನಕ್ಷತ್ರ, ಹೂ ಮಲ್ಲಿಗೆ ಜೋಗದ ಸಿರಿಯ ವರ್ಣಿಸುವ 'ತಡಸಲು' ಜೇಡ

ನೇಯ್ದು ಬಲೆ, ಚಿತ್ತಿಮಳೆ - ಹೀಗೆ ಪ್ರಕೃತಿಯ ಸರ್ವಸ್ವವೂ ಅವರ ಕವಿ ಮನಸ್ಸಿಗೆ ಸ್ಫೂರ್ತಿ. ಪಾತರಗಿತ್ತಿಯ ವೈಭವವನ್ನು ವರ್ಣಿಸುತ್ತಾ, ಅವರ ಮಿಂಚಿನ ಚಾಂಚಲ್ಯವನ್ನು ಅಚ್ಚರಿಯಿಂದ ಗಮನಿಸುತ್ತಾರೆ. ಶಬ್ದಗಳ ಕುಲುಕುವಿಕೆಯಲ್ಲಿ ಓದುಗನನ್ನು ಕುಣಿಸುತ್ತಾರೆ.

ಕವಿ 'ಜೀವದ ಬ್ಯಾಸರ ಹರಸಾಕ
ಹಾಡ ನುಡಿಸಾಕ
ಹೆಚ್ಚಿಗೇನು ಬೇಕ ?
ಒಂದು ಹೂತ ಹುಣಸಿಮರ ಸಾಕ 'ಳ'

ಎಂದು ಧನ್ಯತೆಯನ್ನು ಅನುಭವಿಸುತ್ತಾರೆ. ಹೂತ ಹುಣಿಸೀಮರದ ಚೆಲುವು ಕವಿಯ ಕಾವ್ಯಾರಾಧನೆಗೆ ವಸ್ತುವಾಗಿದೆ.

### ೩.೧.೧ ಪ್ರಕೃತಿ ಮತ್ತು ಭೂಮಿ

ಬೇಂದ್ರೆ ತಮ್ಮ ನಿಸರ್ಗ ವೈಭವದಲ್ಲಿ ಭೂಮಿ ಕುರಿತ ಕವನಗಳಿಗೆ ಹೆಚ್ಚು ಆದ್ಯತೆ ನೀಡಿದ್ದಾರೆ. ಸ್ತ್ರೀ ಸಂವೇದನೆಯುಳ್ಳ ಕವಿಗೆ ಭೂಮಿ ಎಂದರೆ ಬರಿ ಮಣ್ಣಲ್ಲ.

ಇಳೆಯೆಂದರೆ ಬರಿ ಮಣ್ಣಲ್ಲ
ನಮಗೋ ನೋಡುವ ಕಣ್ಣಿಲ್ಲ
ಏಸು ತಿಂದರು ತೀರದಿದೆ
ಏನು ತುಂಬಿಯೂ ಮೀರದಿದೆ '೫'

ಎನ್ನುತ್ತಾ 'ಚಿಗರಗಂಗಳ ಚೆಲುವಿ'ಯ ನೋವನ್ನು ಹಂಚಿಕೊಳ್ಳುತ್ತಾರೆ. ತಾಯಿಯ ಸಹನೆಯನ್ನೇ ಹೊಂದಿ ನಮ್ಮನ್ನು ರಕ್ಷಿಸುತ್ತಿರುವ 'ಮೊದಲಗಿತ್ತಿ' ಗೆ ಕೈಮುಗಿಯುತ್ತಾರೆ.

'ಗಂಧವತಿ' ನರುಗಂಪನ್ನು ಆಸ್ವಾದಿಸುತ್ತಾ ಅವಳ ಬಸಿರ 'ಈಶ'ನ್ನು (ಚಿನ್ನ) ಸ್ಮರಿಸುತ್ತಾರೆ. ಭೂತಾಯಿಯ ಪ್ರೀತಿಯನ್ನು ಪದೇ-ಪದೇ ವಿಭಿನ್ನವಾಗಿ ಆಸ್ವಾದಿಸುತ್ತಾ ಧನ್ಯತೆಯನ್ನು ಅನುಭವಿಸುತ್ತಾರೆ. ಪ್ರಕೃತಿಯ ಪ್ರೀತಿಯನ್ನು ದೈವಿಕವಾಗಿ ನೆಲೆಗೊಳಿಸುವುದು ಬೇಂದ್ರೆಯ ವೈಶಿಷ್ಟ್ಯ. ಬೇಂದ್ರೆ ಅವರು ತಮ್ಮ ಕಾವ್ಯಗಳಲ್ಲಿ ಪ್ರಕೃತಿಯನ್ನು ಕೇವಲ ಸೌಂದರ್ಯೋಪಾಸನೆಯ ದೃಷ್ಟಿಯಲ್ಲಿ ಮಾತ್ರ ನೋಡದೆ ಭೂಮಿಯ ಸಕಲ ಜೀವರಾಶಿಗಳನ್ನು ಪೊರೆಯುವ ಶಕ್ತಿ ಎಂದೇ ಪರಿಭಾವಿಸುತ್ತಾರೆ. ತಾವೂ ಪ್ರಕೃತಿಯ ಅವಿಭಾಜ್ಯ ಅಂಗ ಎಂದೇ ಭಾವಿಸುತ್ತಾರೆ. ಭೂಮಿಯ ಪ್ರಕೃತಿಯ ಪ್ರೀತಿಯನ್ನು ಕೃತಜ್ಞತಾ ಪೂರ್ವಕವಾಗಿ ಅನುಭವಿಸಿ ಆರಾಧಿಸುತ್ತಾರೆ. ಬೇಂದ್ರೆ ಪ್ರಕೃತಿಯನ್ನು ಅತ್ಯಂತ ವಾಸ್ತವದ ನೆಲೆಯಲ್ಲಿ ಗ್ರಹಿಸುತ್ತಾರೆ. ತಮ್ಮ ಭಾವಗೀತೆಗಳಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕೃತಿಯ ಕುರಿತೇ ಬರೆದಿದ್ದಾರೆ. ಮನುಷ್ಯ ಪ್ರಕೃತಿಯ ನಡುವಿನ ಅನ್ಯೋನ್ಯ ಸಂಬಂಧವನ್ನು ತಮ್ಮ ಕವಿತೆಗಳಲ್ಲಿ ಸೂಕ್ಷ್ಮವಾಗಿ ಕಡೆದಿರಿಸಿದ್ದಾರೆ. ಗಮಗಮಾ ಗಮಾಡಸತಾವ ಮಲ್ಲಿಗೆ, ಬೆಳದಿಂಗಳ ನೋಡಾ, ದವನ-ಕವನ, ಮಲ್ಲಿಗೆ, ಚಿಗರಿಗಂಗಳ ಚಲುವೆ, ರಾಗರತಿ, ಅನಂತಪ್ರಣಯ ಕಿಡಿ ಭಾವಗೀತೆಗಳಲ್ಲಿ ಪ್ರಕೃತಿ ಹಾಗೂ ಮಾನವ ಸಂಬಂಧದ ಕುರಿತು ಚಿತ್ರಿಸಿದ್ದಾರೆ.

೩.೨ಸಾಮಾಜಿಕ ಕವನಗಳು

ಕವಿಗೆ ಸಾಮಾಜಿಕ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಬೇಂದ್ರೆ ಭಾರತದ ಚರಿತಾರ್ಹ ದಿನಗಳಲ್ಲಿ ಬಾಳಿ ಬದುಕಿದವರು. ಸ್ವಾತಂತ್ರದ ನೋವು, ವೈಯುಕ್ತಿಕ ಬದುಕಿನ ಬಡತನ, ಸಾಮಾಜಿಕ ಅಸಮಾನತೆ, ಹಸಿವು, ಶೋಷಣೆ ವೇಶ್ಯಾ ಸಮಸ್ಯೆ, ವಿಧವಾಸಮಸ್ಯೆ, ಲಿಂಗ ಅಸಮಾನತೆ, ಮೂಢನಂಬಿಕೆ ಇತ್ಯಾದಿಗಳಿಗೆ ಸ್ವತಃ ಸಾಕ್ಷಿಯಾದವರು. ಸಮಸ್ಯೆಗಳಿಗೆ ಮಿಡಿಯುವ ಮನಸ್ಸು ಕವಿಯಲ್ಲಿತ್ತು. ಶ್ರೀಮಂತಿಕೆಯ ಅಟ್ಟಹಾಸವನ್ನು ಪ್ರತಿಬಿಂಬಿಸುವ ಕವನ ಕುರುಡು ಕಾಂಚಾಣದಲ್ಲಿ ಸಮಸ್ಯೆಯ ಪರ ಕಾಳಜಿ ಕಂಡುಬರುತ್ತದೆ.

ಕುರುಡು ಕಾಂಚಾಣಾ ಕುಣಿಯುತ್ತಲಿತ್ತು !
ಕಾಲಿಗೆ ಬಿದ್ದವರ ತುಳಿಯುತಲ್ಲಿತ್ತೊ

ಹಣವುಳ್ಳವರಿಗೆ ಕರುಣೆಯ ಕಣ್ಣಿರುವುದಿಲ್ಲ. ದೇಹಿ ಎಂದವರ ರಕ್ಷಿಸದೆ ಅಟ್ಟಹಾಸದಿಂದ ಮರೆಯುವ ಶ್ರೀಮಂತಿಕೆ ಮುಂದೊಮ್ಮೆ ಮಣ್ಣು ಮುಕ್ಕಬೇಕಾಗುತ್ತದೆ ಎಂದು.

ಹ್ಯಾಂಗಾರೆ ಕುಣಿ ಕುಣಿದು
ಮಂಗಾಟ ನಡೆದಾಗ
ಅಂಗಾತ ಬಿತ್ತೋ, ಹೆಗಲಲ್ಲಿ ಎತ್ತೋ '೬'

ಎಂದು ಎಚ್ಚರಿಸಿದ್ದಾರೆ. ಹೆಗಲಲ್ಲಿ ಎತ್ತುವ ಕ್ರಿಯೆ - ಸಾವಿನ ಸೂಚನೆಯಾಗಿದೆ. ಅಟ್ಟಹಾಸಕ್ಕೆ ಕೊನೆ ಇರಲೇಬೇಕೆಂಬ ಆಶಾಭಾವ. ಇಲ್ಲಿ ವ್ಯಕ್ತವಾಗಿದೆ.

"ಮನುಷ್ಯ ತನ್ನ ಸ್ವಾರ್ಥಕ್ಕಾಗಿ ನಿಸರ್ಗದ ಮೇಲೆ ನಡೆಸಿರುವ ದಾಳಿಯ ಚರಿತ್ರೆಯನ್ನು ಬೇಂದ್ರೆ ಅವಲೋಕಿಸುತ್ತಾರೆ. ಮಂಗ, ಎತ್ತು, ಕರಡಿ ಇವೆಲ್ಲಾ ಶೋಷಿತರ ಸ್ಥಾನದಲ್ಲಿಯೂ, ಮನುಷ್ಯ ಶೋಷಕನ ಸ್ಥಾನದಲ್ಲಿಯೂ ನಿಂತಿದ್ದಾನೆ. ಮಾನವತಾವಾದಿಯಾಗಿ ಬೇಂದ್ರೆ ಈ ಅಂಶವನ್ನು ಗ್ರಹಿಸಿದ್ದಾರೆ. ಅಬ್ಬರವಿಲ್ಲದೆ ನ್ಯಾಯ ಅನ್ಯಾಯದ ತೀರ್ಪನ್ನು ನೀಡದೆ ತಣ್ಣಗೆ ವಿವರಿಸುತ್ತಾರೆ.೭"

'ಭೂಮಿ ತಾಯಿಯ ಚೊಚ್ಚಲ ಮಗ', 'ಒಂದೇ ತಾಯಿಯ ಮಕ್ಕಳು' ಕವನಗಳಲ್ಲಿ ಭೂ ತಾಯಿ ನಮ್ಮೆಲ್ಲರಲ್ಲೂ ಸರ್ವಸಮಾನತಾ ಭಾವನ್ನು ಕಂಡಿರಿಸಿದೆ. ಆದರೆ ಸಣ್ಣತನವನ್ನು ಹೊಂದಿದ ಕೃತಘ್ನರಾದ ಮನುಷ್ಯರು ತರ-ತಮವನ್ನು ಎಣಿಸುತ್ತೇವೆ ಎಂಬ ಭಾವ ವ್ಯಕ್ತವಾಗಿದೆ. ಭೂಮಿತಾಯಿಯ ಚೊಚ್ಚಲು ಮಗನಾದ ರೈತನ ಸ್ಥಿತಿ ಚಿಂತಾಜನಕವಾಗಿದೆ. ಮಳೆ, ಬೆಳೆ, ಹುಳು ಹುಪ್ಪಟಗಳೆಲ್ಲಾ ಇವನಿಗೆ ವಿರುದ್ಧವಾಗಿವೆ.

ಸಾವಿನ ಬೆಳಕನ್ನು ನಾವು ಕಾಣುವುದೆಂದು ಎಂದು ಬಯಸುವ ರೈತನ ಪಾಲಿಗೆ ಸಾವೇ ಮುಕ್ತಿಯಾಗಿದೆ. ಭೂತಾಯಿಯಲ್ಲೇ ತನ್ನ ಬದುಕನ್ನು ಕಾಣುವ ಮಣ್ಣಿನ ಮಗನ ಗೋಳಿನಲ್ಲಿ ಅಂದಿಗೂ, ಇಂದಿಗೂ ಯಾವುದೇ ವ್ಯತ್ಯಾಸವಿಲ್ಲ. ಅಂದು ಸಾವಿಗೆ ಹಂಬಲಿಸಿದವನು ಇಂದು ಆತ್ಮವನ್ನು ತಾನೇ ಕೊನೆಗಾಣಿಸಿಕೊಳ್ಳುತ್ತಿರುವ ವಿಪರ್ಯಾಸದ ಬದುಕಿಗೆ ಕೊನೆಯಿಲ್ಲವೇನೋ ? ಅನ್ನ ನೀಡದ ಧರ್ಮಕ್ಕೆ ಛೀಕಾರ ಹಾಕುವ ಬೇಂದ್ರೆ ಮೂಲತಃ ಧರ್ಮಭೀರು, ಆದರೆ ತುತ್ತು ಅನ್ನವಿಲ್ಲದಲ್ಲಿ ಧರ್ಮಕ್ಕೇನು ಕೆಲಸ ? ದೇವರಿಗೊಂದು ಗೋರಿ ಕಟ್ಟೋಣ ಎಂದು ಕೆರಳುತ್ತಾರೆ.

ಹತ್ತು ಅವತಾರಕ್ಕಿಂತ ಮುತ್ತಿನಂಥ ಒಂದು ಅವತಾರವಾಗಬೇಕು ಎಂಬ ಹಳಹಳಿಕೆ ಕಂಡು ಬಂದಿದೆ. 'ಅನ್ನದಾತ ಮಹಾಯಜ್ಞ' ಬದುಕಲಿರುವ ಬಾಯಿಗಳಿಗೆ ತುತ್ತು ಬೇಕು, 'ಬೆಣ್ಣೆ- ಎಣ್ಣೆ ಎರೆಯಬನ್ನಿ ಹಸಿದ

ಹೊಟ್ಟೆ ನೆತ್ತಿಗೆ' ಎಂದು ಅನ್ನ ಯಜ್ಞದಲ್ಲಿ ಕರೆ ನೀಡಿದ್ದಾರೆ. ದರಿದ್ರ ನಾರಾಯಣ, ಯಜ್ಞ, ಅನ್ನ ಬಕಾಸುರರ ರಾಜ್ಯದಲ್ಲಿ ಅನ್ನಬೇಕು, ಬೈರಾಗಿಯ ಹಾಡು, ಕೆಲಸವಿಲ್ಲದವರ ಹಾಡು ಈ ಎಲ್ಲ ಭಾವಗೀತೆಗಳಲ್ಲಿ ಹಸಿವು, ಬಡತನ ಬಡವರ ದುಸ್ಥಿತಿ, ಅನ್ನದ ಗೋಳು ವ್ಯಕ್ತವಾಗಿದೆ. ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯು ಇಲ್ಲಿ ಧ್ವನಿತವಾಗಿದೆ.

ಸಮಾಜವಾದದ ಜೊತೆಗೆ ಮಾನವತಾವಾದವೂ ಬೇಂದ್ರೆ ಕಾವ್ಯದ ಮುಖ್ಯ ಕಳಕಳಿಯಾಗಿದೆ. ಅರ್ಥಹೀನ ಆಚರಣೆ, ಮೂಢನಂಬಿಕೆಗಳ ವಿರುದ್ಧ ತೀವ್ರವಾದ ಪ್ರತಿಕ್ರಿಯೆಯನ್ನು ಸೂಚಿಸುತ್ತಾರೆ. ಪತಿಯನ್ನು ಕಳೆದುಕೊಂಡ ಪುಟ್ಟ ಹೆಣ್ಣಿನ ನೋವು, ಅವಳ ಮಾನಸಿಕ-ದೈಹಿಕ ಶೋಷಣೆಯಯನ್ನು 'ಪುಟ್ಟ ವಿಧವೆ' ಯಲ್ಲಿ ಹೇಳಿದ್ದಾರೆ. ಹೆಣ್ಣಿನ ಕುರಿತ ಕಾಳಜಿ, ಕಳಕಳಿ ಅವಳಿಗಾಗುವ ಶೋಷಣೆಯ ವಿರುದ್ಧ ಪ್ರತಿಭಟಿಸಲು ಪ್ರರೇಪಿಸುತ್ತದೆ. ಕವಿ ಸಾಹಿತ್ಯದ ಸೃಷ್ಟಿಸುವ ಸಂದರ್ಭದಲ್ಲಿ ಸಾಮಾಜಿಕ ಹೊಣೆಯನ್ನು ತಾನು ಸಮರ್ಥವಾಗಿ ನಿಭಾಯಿಸಬಲ್ಲ ಎಂಬುದಕ್ಕೆ ಈ ಕವನಗಳು ಸಾಕ್ಷಿಯಾಗಿವೆ. ಬೀದಿನಾಯಿರಾಧೇ, ಹುಬ್ಬಳ್ಳಿಯಾಂವದರಲ್ಲಿ ವೇಶ್ಯಾವಾಟಿಕೆಯ ದಾರುಣ ಚಿತ್ರಣವನ್ನು, ಸಾಮಾಜಿಕ ಅನಿಷ್ಟವನ್ನು ಸಣ್ಣ ದನಿಯಲ್ಲಿ ಹೇಳಿದ್ದಾರೆ. ನಮ್ಮ ಸಮಾಜದ ಹೆಣ್ಣು ಧರ್ಮ, ಆಚಾರ ನಂಬಿಕೆಗಳ ಮಧ್ಯೆ ನಲುಗಿ ಹೋದ ಕತೆಯನ್ನು ನೋವಿನಿಂದ ಚಿತ್ರಿಸುತ್ತಾರೆ. 'ಯಾರಿಗೆ ಬೇಕಾಗೈತಿ ನಿಮ್ಮ ಕವಿತಾ' ದಲ್ಲಿ ಹೊಟ್ಟೆಗೆ ಹಿಟ್ಟಿಲ್ಲದಾಗ ಜುಟ್ಟಿಗೇಕೆ ಮಲ್ಲಿಗೆ ಹೂವು ಎಂಬ ವ್ಯಂಗ್ಯವಿದೆ. ಕಾವ್ಯದ ಗ್ರಹಿಕೆ ತುತ್ತಿನಚೀಲ ತುಂಬಿದ ಮೇಲಷ್ಟೇ ಸಾಧ್ಯ, ಎಂಬ ಕವಿ ವಿವರ ಇದೆ.

### ೩.೩ ದೇಶಭಕ್ತಿ ನಾಡು-ನುಡಿಯ ಗೀತೆಗಳು

ಕವಿ ಬೇಂದ್ರೆ ತಮ್ಮ ತಾಯಿ ನಾಡು ಪರಕೀಯರ ಕಪಿಮುಷ್ಠಿಯಲ್ಲಿ ನರಳಿದ್ದನ್ನು ಕಂಡುಂಡು ಅನುಭವಿಸಿದವರು, ಕೊರಗಿ ನರಳಿದವರು. ತಮ್ಮ ಆ ನೋವನ್ನು ಹಾಡಾಗಿ ಹೊಮ್ಮಿಸಿದರು. ಬೇಂದ್ರೆ ಅವರಲ್ಲಿ ತಮ್ಮ ದೇಶ, ನಾಡು-ನುಡಿಯ ಬಗ್ಗೆ ಇದ್ದ ಕಾಳಜಿ ಅಪಾರ. ತಾವು ಐವರು ತಾಯಂದಿರಿಂದ ಕೃತಕೃತ್ಯನಾಗಿದ್ದಾರೆ. ಒಬ್ಬ ತಾಯಿಯ ಮಗನೇ ಪರಿಪುಷ್ಟನಾಗುತ್ತಾನೆಂದ ಮೇಲೆ ಐವರು ತಾಯಂದಿರಾದರೆ ಆತನ ಬೌದ್ಧಿಕ ಹಾಗೂ ಮಾನಸಿಕ ಶ್ರೇಷ್ಠತೆ ಎತ್ತ ಸಾಗಬಹುದು ಎನ್ನುವುದಕ್ಕೆ ಕವಿಯೇ ಸಾಕ್ಷಿ, ಭೂಮಾತೆ, ಭಾರತ ಮಾತೆ, ಕರ್ನಾಟಕ ಮಾತೆ, ಧಾರವಾಡ ಮಾತೆ ಹಾಗೂ ಅಂಬಿಕಾಮಾತೆಯರೇ ಇವರ ಐವರು ಐದೆಯರು.

ತಾನು-ತನ್ನದು ಎಂಬ ಪ್ರೇಮ ತಾಯಿ ಮೂಲದಿಂದಲೇ ಮೂಡುವಂತಹುದ್ದು. ಈ ಹಿನ್ನೆಲೆಯಲ್ಲಿ ಬೇಂದ್ರೆ ತನ್ನ ರಾಷ್ಟ್ರಪ್ರೇಮವನ್ನು ಕಾವ್ಯಮುಖೇನ ಅಭಿವ್ಯಕ್ತಿಸಿದ್ದಾರೆ. ತನ್ನ ದೇಶಭಕ್ತಿಯ ಪ್ರಕಟಕ್ಕೆ ಸೀಮಿತ ಗಡಿಯನ್ನು ನಿರ್ಮಿಸಿಕೊಳ್ಳದ ಬೇಂದ್ರೆ ನಾಡು ನುಡಿಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಶ್ರಮಿಸಿದ ಎಲ್ಲರನ್ನೂ ನಿಷ್ಠೆಯಿಂದ ನೆನಪಿಸಿಕೊಳ್ಳುತ್ತಾರೆ. "ಕವಿಯ ದೇಶ ಪ್ರೇಮದಲ್ಲಿ ಸಾಹಿತ್ಯ ಪ್ರೇಮವಿದೆ. ದೇಶಿವಾಸಿಗಳ ಸಲುವಾಗಿ ಒಂದು ಭಾವವಿದೆ. ದುಃಖಿತರಲ್ಲಿ ಸಹಾನುಭೂತಿಯಿದೆ. ವೈಭವದಲ್ಲಿ ಅಭಿಮಾನವಿದೆ. ದುಃಖಿತರಲ್ಲಿ ಸಹಾನುಭೂತಿಯಿದೆ. ವೈಭವದಲ್ಲಿ ಅಭಿಮಾನವಿದೆ, ದೇಶದ ಒಂದು ಹುಲ್ಲು ಕಡ್ಡಿಯ ಬಗೆಗೂ ಆದರ ಭಾವವಿದೆ. ನನ್ನದೆಂಬ ಸಾತ್ವಿಕ ಅಹಂಕಾರವಿದೆ. ಆದುದರಿಂದ ಕವಿಯು ಪ್ರಾಚೀನ ಕವಿಗಳನ್ನು ನೆನವಂತೆ ಆಧುನಿಕ ಕವಿಗಳನ್ನು ಮರೆತಿಲ್ಲ ಕವಿಗಳಂತೆ ವಿಭೂತಿಗಳನ್ನು, ಜ್ಞಾನಿಗಳನ್ನು ಸ್ಮರಿಸಿದ್ದಾರೆ. ಗತವೈಭವದೊಡನೆ ಪ್ರಚಲಿತ ವೈಭವವನ್ನೂ ಸ್ಮರಿಸಿದ್ದಾನೆ. ಕವಿಯ

ಬಾಯೊಳಗಿನ ನಾಲಿಗೆಯೆಂದರೆ ನಾಡ-ನುಡಿ ನುಡಿಯನ್ನು ನಲಿಸುವುದೇ ಕವಿಗೆ ದೇಶ ಪ್ರೇಮದ ಹಾದಿ ೮"

ತಾಯಿ ಹಾಗೂ ತಾಯಭೂಮಿ ಸ್ವರ್ಗಕ್ಕೂ ಮಿಗಿಲು ಎಂಬ ಭಾವ ಅವರ ದೇಶಭಕ್ತಿ ಗೀತೆಗಳಲ್ಲಿವೆ. ತನ್ನ ವ್ಯಕ್ತಿತ್ವವೇ ಕನ್ನಡತನದೊಂದಿಗಿದೆ ಎಂದು ಹೆಮ್ಮೆಯಿಂದ ಗುರುತಿಸಿಕೊಂಡಿದ್ದಾರೆ. ತಾನು ರಚಿಸಿದ ಕಾವ್ಯ ಕೂಡ ನನ್ನದಲ್ಲ ಎಂದು 'ಗರಿ' ಯ ಮುನ್ನುಡಿಯಲ್ಲಿ ನಿವೇದಿಸಿಕೊಂಡಿದ್ದಾರೆ. "ನನ್ನ ಕವನಗಳು ಎಂದು ಇದೀಗ ಹೇಳಿದೆನಷ್ಟೇ ಅದೊಂದು ರೂಢಿಯ ಮಾತು ಇವು ನನ್ನವಲ್ಲ ; ಕನ್ನಡದ ಕವನಗಳು ಕನ್ನಡದ ಅಶರೀರವಾಣಿಯು ಸಾವಿರ ಬಾಯಿಂದ ನನ್ನ ಕಣಸನ್ನು ಕನ್ನಡಿಸುತ್ತಿವೆ. ಆ ಸಾವಿರ ಬಾಯಿಗಳಲ್ಲಿ ನನ್ನದೊಂದು. ಅದೇ ನನ್ನ ಧನ್ಯತೆ, ಕನ್ನಡದ ಪುನರ್ಜನ್ಮದ ಪ್ರಭಾತದಲ್ಲಿ ಹಾಡುವ ಕವಿಗಣದಲ್ಲಿ ನಾನೊಬ್ಬ .... ಕನ್ನಡವು ತನ್ನ ಕವನ ಎನ್ನುವುದಷ್ಟೇ ನಿಜ ದಿಟ. ಒಂದೇ ಕಣಸನ್ನು ಹಲವು ಕಣ್ಣು ಕಾಣುತ್ತಿವೆ. ಒಂದೇ ಕಣಿಯನ್ನು ಹಲವು ಬಾಯಿ ಹಾಡುತ್ತಿವೆ. ಈ ಹಲವುಗಳಲ್ಲಿ ತೋರಿ ಮರೆಯಾಗುವ ಒಂದನ್ನು ಎಲ್ಲಿಯೋ ಎಲ್ಲರೂ ಅರಿತೇ ಹಲವನ್ನು ಬರಮಾಡಿಕೊಳ್ಳುವರು. ಇದರಲ್ಲಿ ಅಪ್ಪಿ-ತಪ್ಪಿ ಬಂದ, "ನನ್ನ" ದೆಂಬ ಕೆಟ್ಟವು ಸಹೃದಯರ ಸಾರಸ್ವತ ಯಜ್ಞದಲ್ಲಿ ಸುಟ್ಟು ಕನ್ನಡದ ಚಿನ್ನವಷ್ಟೇ ಉಳಿಯುವುದು. ೯

'ಕನ್ನಡದ ಕಂದವ್ವನ ಲಾಲಿ' ಎಂಬ ಕವನದಲ್ಲಿ 'ಭಾರತ ಮಾತೆಯ ಪೂರ್ವ- ಪಶ್ಚಿಮ ಘಟ್ಟಗಳ ತೊಟ್ಟಿಯಲ್ಲಿ ಮಲಗಿದ್ದ ಕನ್ನಡದ ಕಂದವ್ವನಿಗೆ' ಲಾಲಿ ಹಾಡಿದ್ದಾರೆ. ಕನ್ನಡ ಕರ್ನಾಟಕ ಎಂಬ ವಿಶೇಷ ಮೋಹ ಕವಿಯಿಂದ ಕವನದಲ್ಲಿ ಕಂಡ ಕನಸಿನ ಕುರಿತ ಭಾವಗೀತೆಯಲ್ಲಿ ಕನ್ನಡ ತಾಯಿಯೊಡನೆ ಕನ್ನಡಿಗನ ವಾದ-ಸಂವಾದ ಮೂಡಿ ಬಂದಿದೆ. ಒಂಟಿಯಾಗಿ ನಿಂತ ಅಸಹಾಯಕ ಮುತ್ತೈದೆಯೊಂದಿಗೆ ನಡೆದ ಸಂವಾದದಲ್ಲಿ ತಾಯಿ ತನ್ನ ಮಕ್ಕಳಲ್ಲಿ ಮೂಡಿರುವ ಒಡಕನ್ನು ಮುಚ್ಚಲು 'ಗಂಡಸಾದರೆ ನಿನ್ನ ಬಲಿಕೊಡುವೆಯೇನು'? ಎಂಬ ಪ್ರಶ್ನೆಯ ಮೂಲಕ ಕನ್ನಡಿಗ ಅಗತ್ಯ ಬಿದ್ದರೆ ಬಲಿದಾನಕ್ಕೂ ಸಿದ್ದನಿರಬೇಕೆಂಬ ಕರೆ ನೀಡುತ್ತಾರೆ.

ಕೋಲಾಟದ ಧಾಟಿಯ 'ಕನ್ನಡದಪ್ಪನ ಕೋಲು' ಕನ್ನಡದ ರಾಷ್ಟ್ರಗೀತೆಯಂತಿದೆ. ಕರ್ನಾಟಕದ ಸಾಮರಸ್ಯವನ್ನು ಸಾರುವ ಕನ್ನಡದ ಪಾವನ ಪರಂಪರೆ, ಕನ್ನಡದ ಏಕೀಕರಣವನ್ನು ಸಾರುವ 'ಕನ್ನಡದ ಕಮಳ','ಒಳನುಡಿ', 'ದಿವ್ಯಧ್ವನಿ', 'ಕೇಳಿ ನುಡಿಯುವುದುಂಟು' ಹಂಪಿ-ವಿಜಯನಗರದರ್ಶನ ಇತ್ಯಾದಿಗಳು ಇವರ ನಾಡು ನುಡಿಯ ಕೆಲವು ಕವನಗಳಾಗಿವೆ.

ಸ್ವಾತಂತ್ರೋತ್ತರದ ಕಾಲದವರಾದ್ದರಿಂದ ಸ್ವಾತಂತ್ರದ ಕುರಿತಾದ ಆಶೆ ಕವಿಪ್ರಜ್ಞೆಯಾಗಿ ಮೂಡಿ ಬಂದಿದೆ. ಅಹಹ! ಸ್ವಾತಂತ್ರ್ಯದೇವಿ ! ಕನದಲ್ಲಿ ಸ್ವಾತಂತ್ರದ ಕನಸ ಹಾರೈಸಿದ್ದಾರೆ. 'ಇಗೋ ಹೊರೆಟೆವು ಬಿಡುಗಡೆಗಾಗಿ ಬಹರಾರು ನಮಗಿದಿರಾಗಿ?' ಎಂದು ಬಿಡುಗಡೆಗಾಗಿ ಹಂಬಲಿಸಿ ಎದೆ ಸೆಟಿಸಿದ್ದಾರೆ. ೩೩,೦೦,೦೦,೦೦೦ ಪದ್ಯದಲ್ಲಿ ೩೩ ಕೋಟಿ ಭಾರತೀಯರ ಪರಾತಂತ್ರ್ಯದ ಗೋಳಿನ ವಿವರವಿದೆ. ತರುಣ ತಪಸ್ವಿ, ನಾಡಗುಡಿ, ನರಬಲಿ, ಭಾವಗೀತೆಗಳಲ್ಲಿ ಸ್ವಾತಂತ್ರ್ಯಾಕಾಂಕ್ಷೆ ಹಾಗೂ ದೇಶಭಕ್ತಿಗಳು ಪ್ರಕಟವಾಗಿದೆ. 'ನರಬಲಿ' ಕವನದ ರಚನೆಗಾಗಿ ಬೇಂದ್ರೆ ಅವರು ಹಿಂಡಲಗಿ ಹಾಗೂ ಮುಗದದಲ್ಲಿ ನಜರಬಂಧಿ ಶಿಕ್ಷೆಯನ್ನು ಅನುಭವಿಸಿದ್ದು ಈಗ ಇತಿಹಾಸ. ಈ ಕವನ ಜನರನ್ನು ಸಾಮ್ರಾಜ್ಯ ಶಾಹಿಯ ವಿರುದ್ಧ ಹುರಿದೆಬ್ಬಿಸಲು ರಚಿಸಿದ್ದೆಂಬ ಆರೋಪದ ಮೇಲೆ ಭಾರತವನ್ನು ಅಂದು ಆಳುತ್ತಿದ್ದ ಬ್ರಿಟಿಷ್ ಆಳರಸರು ಈ ಶಿಕ್ಷೆಯನ್ನು ಕವಿ ಬೇಂದ್ರೆಯವರಿಗೆ ವಿಧಿಸಿದ್ದರು. ಸಾಹಿತಿಯ ಸಾಮೂಹಿಕ ಹೊಣೆಗಾರಿಕೆಗೆ ಇದು ಕೈಗನ್ನಡಿಯಾಗಿದೆ.

### ೩:೩:೧ ದೇಶಭಕ್ತರ ಗೀತೆಗಳು

ದೇಶ, ಭಾಷೆ, ನೆಲ, ಜಲ, ಕುರಿತು ಹೋರಾಡಿದ ವಿಭೂತಿ ಪುರುಷರ, ಸಾಧಕರ, ಸಾಹಿತಿಗಳ, ಸ್ವಾತಂತ್ರ ಹೋರಾಟಗಾರರ ಬಗ್ಗೆ ಅನೇಕ ಭಾವಗೀತೆಗಳನ್ನು ರಚಿಸಿದ್ದಾರೆ. ಗಾಂಧೀಜಿ, ಕಸ್ತೂರ ಬಾ, ಅರವಿಂದ, ಶ್ರೀಮಾತಾ, ಖಲೀಲ್ ಗಿಬ್ರಾನ್, ರಾಮಕೃಷ್ಣ ಪರಮಹಂಸ, ರಮಣ ಮಹರ್ಷಿ ಹೀಗೆ ವಿಭೂತಿ ಪುರುಷರ ಕುರಿತು ಭಕ್ತಿ ತೋರುತ್ತಾರೆ.

ವೃದ್ಧ ಗಾಂಧಿಯನ್ನು ಕುರಿತು
ಯಾವನಾ ಜೀವನವೆ ಕವನವೆನೆ ಪವನನಲಿ
ತನನ ತಂತಿಯ ಮೀಟಿ ತಣಿಸುತಿಹುದು
ಅವನೆಂಥ ವೃದ್ಧ ?
ಅವನೆ ಬುದ್ಧಾ ? '೧೦'

ಎಂದು ಗಾಂಧಿ ಜೀವನದ ಸಮೃದ್ಧತೆಗೆ ನಮೋ ಎನ್ನುತ್ತಾರೆ. ಶ್ರೀಮಾತಾ, ಅರವಿಂದರ ದೈವಿಕ ಶಕ್ತಿಯನ್ನು ಕುರಿತಂತೆ ಪರಾತ್ಪರವೆ ಗುರುವಾಗಿ ಇಬ್ಬರೂ ಒಬ್ಬ ದೇವನಂತೆ ಕವಿಯ ನೆತ್ತಿಯಲಿ ಆರುಹುತಿಹರು ಸೆತ್‌ಯಕ್ಷಿ ಭಾವದಂತೆ ಎಂದು 'ಬೆಳ್ಳಿಹೂ' ಭಾವಗೀತೆಯಲ್ಲಿ ಸ್ಮರಿಸುತ್ತಾರೆ.

ಆದಿಕವಿ ಪಂಪನ ಕುರಿತು

'ಕನ್ನಡದ ಸವಿ ನುಡಿಯ ಭಾವ ಬೆಳಗುವ ಸೂರ್ಯ
ಈಗಲೂ(ಳೂ) ನೆಡೆದಿಹುದು ಕವಿಯೆ ನಡೆಸಿದ ಕಾರ್ಯ ೧೧

ಎಂದ ಕವಿ ನಮನ ಸಲ್ಲಿಸುತ್ತಾರೆ. ಕಿಟ್ಟೆಲ್, ಬಸವ, ಅಲ್ಲಮ ಪ್ರಭು, ಸಿದ್ದರಾಮ, ಕನಕದಾಸ, ರತ್ನಾಕರ, ಮುದ್ದಣ, ಸರ್ವಜ್ಞ, ಲಕ್ಷ್ಮೀಶ ಮೊದಲಾದ ಕನ್ನಡ ಸಾಹಿತ್ಯ ಚೈತನ್ಯಗಳಿಗೂ ಅಕ್ಷರ ಶ್ರದ್ಧಾಂಜಲಿಯನ್ನು ನಿವೇದಿಸುತ್ತಾರೆ.

ಸಮಕಾಲೀನರಾದ ಹಿರಿಯ, ಕಿರಿಯ ಸಾಹಿತಿಗಳನ್ನು ಗೆಳೆಯರನ್ನು ನೆನಪಿನ ತೆಕ್ಕೆಯಲ್ಲಿರಿಸಿ ಕಾವ್ಯ ಮುಖೇನ ವಂದಿಸುತ್ತಾರೆ. ಸಿದ್ದವನಹಳ್ಳಿ ಕೃಷ್ಣಶರ್ಮ, ಶಾಂತಕವಿ, ಬಿ.ಎಂ.ಶ್ರೀ, ವಿ.ಸೀ, ಗೌರಮ್ಮ, ಆಲೂರ ವೆಂಕಟರಾಯರು ಹೀಗೆ ಎಲ್ಲಾ ಸಾಧಕರನ್ನು ಪ್ರೀತಿಯಿಂದ ನೆನೆಸಿಕೊಂಡಿದ್ದಾರೆ. ತಮ್ಮ ಸಮಕಾಲೀನರಾದ ಜ್ಞಾನಪೀಠ ಪ್ರಶಸ್ತಿ ವಿಜೇತ ಕುವೆಂಪು ಅವರನ್ನು

ಯುಗದ ಕವಿಗೆ
ಜಗದ ಕವಿಗೆ
'ಶ್ರೀ ರಾಮಾಯಣದರ್ಶನ'ದಿಂದಲೇ ಕೈ
ಮುಗಿದ ಕವಿಗೆ -ಮಣಿಯದವರು ಆರು ? ೧೨

ಎಂದು ಬೇಂದ್ರೆ ಕೊಂಡಾಡಿದ್ದಾರೆ. ಭಾರತೀಯನಾಗಿ, ಕನ್ನಡಿಗನಾಗಿ ಕನ್ನಡ ದೇಶ, ಭಾಷೆ ಜಲ, ನೆಲದ ಕುರಿತು ಮಾತ್ರವಲ್ಲದೆ ಬೇರೆ ಬೇರೆ ದೇಶಗಳ ಕುರಿತ ದೇಶ ಪ್ರೇಮಗೀತೆಗಳನ್ನು ರಚಿಸಿದ್ದಾರೆ. ಅಲ್ಲದೇ ಅನುಭಾವಿಕ ಹಾಗೂ ಸಂಖ್ಯಾದರ್ಶನದ ಕವಿತೆಗಳನ್ನೂ ರಚಿಸಿದ್ದಾರೆ.

ಬೇಂದ್ರೆ ಅವರ ಭಾವಗೀತೆಗಳಲ್ಲಿ ಪ್ರೇಮಗೀತೆ, ದಾಂಪತ್ಯಗೀತೆ, ವಾತ್ಸಲ್ಯಗೀತೆ, ಸ್ನೇಹಗೀತೆಗಳೂ ಸಾಕಷ್ಟು ಸಂಖ್ಯೆಯಲ್ಲಿವೆ. ಅವುಗಳನ್ನು ಮುಂದಿನ ಎರಡು ಅಧ್ಯಾಯಗಳಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

## ಅಡಿಟಿಪ್ಪಣಿ

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧)ರಾಘುವೇಂದ್ರರಾವ್ ಹೆಚ್. ಎಸ್. | ಹಾಡೇ ಹಾದಿಯ ತೋರಿತು ಮಂಗಳೂರು ಕೇಂದ್ರ | ಕನ್ನಡ ಸಂಘ , ಬೆಂಗಳೂರು, ೧೯೯೫ (ಪು.ಸಂ.-೮೮) |
| ೨)ವಾಮನಬೇಂದ್ರೆ (ಸಂ) | ಅಂಬಿಕಾತನಯ ದತ್ತರ ಸಮಗ್ರ ಕಾವ್ಯ ವಿನ್ಯಾಸ ಸಂ.೪ | ದ.ರಾ.ಬೇಂದ್ರೆ ಸಂಶೋಧನಾ ಸಂಸ್ಥೆ ಹುಬ್ಬಳ್ಳಿ ೨೦೦೩ (ಪು.ಸಂ.-೨೪೮) |
| ೩)ಅದೇ | | (ಪು.ಸಂ.-೨೬೬) |
| ೪)ವಾಮನಬೇಂದ್ರೆ (ಸಂ) | ಅಂಬಿಕಾತನಯ ದತ್ತರ ಸಮಗ್ರ ಕಾವ್ಯ ದರ್ಶನ ಸಂ.೨ | (ಪು.-೨೫) |
| ೫)ವಾಮನ ಬೇಂದ್ರೆ (ಸಂ) | ಅಂಬಿಕಾತನಯ ದತ್ತರ ಸಮಗ್ರ ಕಾವ್ಯ ವಿನ್ಯಾಸ ಸಂ.೪ | (ಪು.-೨೧) |
| ೬)ಅದೇ | | (ಪು.-೧೦೫, ೧೦೬) |
| ೭)ಲೋಕೇಶ ಅಗಸನಕಟ್ಟೆ | ಕನ್ನಡ ಕಾವ್ಯ, ಸಮಾಜ, ಸಂಸ್ಕೃತಿ | ಅಲೋಕ ಪ್ರಕಾಶನ, ದಶಮೀ ತರಳಬಾಳು ಬಡಾವಣೆ, ಚಿತ್ರದುರ್ಗ- ೨೦೦೩ (ಪು.-೧೦೫) |
| ೮)ಬುದ್ಧಣ್ಣ ಹಿಂಗಮಿರೆ (ಸಂ) | ಇಳಿದು ಬಾ ತಾಯಿ - ಶ್ರೀ ಬೇಂದ್ರೆ ಅಭಿನಂದನಾ ಗ್ರಂಥ | ಸಾಹಿತ್ಯ ಮಂಟಪ, ಹುಬ್ಬಳ್ಳಿ ಮತ್ತು ಸಮಾಜ ಪುಸ್ತಕಾಲಯ, ಧಾರವಾಡ ೧೯೭೭ (ಪು.-೩೫೦, ೩೫೧) |
| ೯)ಅಂಬಿಕಾತನದತ್ತ | ಗರಿ | ಮನೋಹರ ಗ್ರಂಥ ಪ್ರಕಾಶನ ಸಮಿತಿ ಧಾರವಾಡ - ೧೯೫೨ (ಪು.-೧, ೨) |
| ೧೦) ವಾಮನ ಬೇದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂ.೩ | ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩ (ಪು.-೨೧೩) |
| ೧೦) ವಾಮನ ಬೇದ್ರೆ (ಸಂ) | ಅಂಬಿಕಾತನಯ ದತ್ತರ ಸಮಗ್ರ ಕಾವ್ಯ ನಮನ ಸಂ.೧ | ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩ (ಪು.೪೪೯) |
| ೧೨) ಅದೇ | | (ಪು.೬೨೩) |

ಅಧ್ಯಾಯ ೪

# ನವೋದಯ ಕಾವ್ಯಗಳಲ್ಲಿ ಪ್ರೇಮಗೀತೆಗಳು

ಕನ್ನಡ ಸಾಹಿತ್ಯದಲ್ಲಿ ಹೆಣ್ಣು-ಗಂಡಿನ ಸಂಬಂಧ ಕುರಿತಂತೆ ಮೂಡಿ ಬಂದ ಕಾವ್ಯಗಳು ಸಾಕಷ್ಟಿವೆ. ಹಳೆಗನ್ನಡ-ನಡುಗನ್ನಡದಲ್ಲಿ ಇಂತಹ ಪ್ರೇಮ ಕಾವ್ಯಗಳು ಪ್ರಸ್ತಾಪಗೊಂಡಿದೆ. ಪ್ರಸ್ತುತ ಪ್ರಬಂಧದ ಹಿನ್ನೆಲೆಯಲ್ಲಿ ನವೋದಯದ ಕನ್ನಡ ಪ್ರೇಮ ಕಾವ್ಯಗಳಿಗೆ ಸೀಮಿತಗೊಳಿಸಲಾಗಿದೆ. ಗಂಡು-ಹೆಣ್ಣಿನ ನಡುವಿನ ಆದರ್ಶ ಸಂಬಂಧದ ಹಿನ್ನೆಲೆಯಲ್ಲಿ ಸೃಷ್ಟಿಗೊಂಡ ಪ್ರೇಮ ಇಲ್ಲಿ ಪ್ರಸ್ತಾಪಿತವಾಗಿದೆ. ಲೈಂಗಿಕತೆಯ ಸ್ಪರ್ಶವಿಲ್ಲದಂತಹ ಭಾವನಾತ್ಮಕವಾದ ಪ್ರೇಮ ಇಲ್ಲಿದೆ. ಸ್ತ್ರೀ-ಪುರುಷ ಸಂಬಂಧಕ್ಕೆ ನೈತಿಕತೆಯ ಚೌಕಟ್ಟಿದೆ. ನವೋದಯ ಕಾಲ ಘಟ್ಟದ ಪ್ರೇಮ ಕಾವ್ಯಗಳು 'ದಾಂಪತ್ಯ ಗೀತೆ' ಗಳಾಗಿಯೇ ಪಡಿಮೂಡಿದೆ. ದಾಂಪತ್ಯದಲ್ಲಿ ಒಲವು ಬೆಳೆಯುವ ಉಳಿಯುವ ಪ್ರೇಮ ಇಲ್ಲಿ ಸುವ್ಯಕ್ತವಾಗಿದೆ. ವಿವಾಹಬಾಹಿರ ಪ್ರಣಯಕ್ಕೆ ಭಾರತೀಯ ಸಮಾಜದಲ್ಲಿ ಪ್ರಾಶಸ್ತ್ಯವಿಲ್ಲ. ನವೋದಯ ಸಾಹಿತಿಗಳ ಒಟ್ಟು ನಿಲುವು ಅಮೂರ್ತವಾದ ಪ್ರೇಮದ ಕಡೆಗೆ ಇದೆ. ಹೆಣ್ಣಿನ ಭಾವನೆಗಳಿಗೆ ಆದ್ಯತೆ ನೀಡುವ ಅವಳ ನೋವು, ತ್ಯಾಗಗಳನ್ನು ಅರ್ಥೈಸಿಕೊಳ್ಳುವ ಕೆಲವೊಮ್ಮೆ ವೈಭವೀಕರಿಸುವ ಪ್ರಯತ್ನಗಳೂ ನಡೆದವು. ಪ್ರಸ್ತುತ ಪ್ರಬಂಧಕ್ಕೆ ಸಂಬಂಧಪಟ್ಟಂತೆ ನವೋದಯ ಘಟ್ಟದ ಕೆಲವು ಪ್ರಮುಖ ಪ್ರಾತಿನಿಧಿಕ ಕವಿಗಳ ಪ್ರೇಮಗೀತೆಗಳನ್ನು ಮಾತ್ರ ಪರಿಶೀಲಿಸಲಾಗಿದೆ.

"ತೀನಂಶ್ರೀ ಅವರ 'ಒಲುಮೆ (೧೯೩೨)' ನವೋದಯ ಕನ್ನಡ ಸಾಹಿತ್ಯದಲ್ಲಿ ಪ್ರಥಮ ಪ್ರೇಮ ಕವನಗಳ ಸಂಕಲನ ವಾಗಿದೆ." ೧ ಸರಳಶೈಲಿಯ ಸಂಪೂರ್ಣ ಭಾರತೀಯ ಸಮಾಜದ ಹಿನ್ನೆಲೆಯಲ್ಲಿ ಕವಿ ತಮ್ಮ ಒಲುಮೆಯನ್ನು ಚಿತ್ರಿಸಿದ್ದಾರೆ.

ನವೋದಯ ಕವಿಗಳಲ್ಲಿ ಕುವೆಂಪು ಅವರು ಪ್ರಮುಖ ಸಾಲಿನಲ್ಲಿದ್ದಾರೆ. ಅವರ ಪ್ರಥಮ ಕವನ ಸಂಕಲನ 'ಕೊಳಲು' ಮುಗ್ಧ ಮನದ ಪ್ರೇಮಗೀತೆಗಳಲ್ಲಿ ಒಂದಾಗಿದೆ.

ಚಂಚಲ ಮನಸಿಗೆ ಹೂವಿನ ಮೃದು ಬೇಲಿ, ಧರ್ಮದ ಹಾದಿಗೆಳೆಯುವ ದೇವಿ ಅವರ ಪ್ರೇಮದ ಹೆಣ್ಣು. ಕುವೆಂಪು ಅವರ 'ಪ್ರೇಮ ಕಾಶ್ಮೀರ', 'ಜೇನಾಗುವಾ' 'ಷೋಡಶಿ' 'ಚಂದ್ರಮಂಚಕೆ ಬಾ ಚಕೋರಿ' 'ಅನುತ್ತರಾ' ಈ ಸಂಕಲನಗಳಲ್ಲಿ ಪ್ರೇಮದ ಮಧುರ ಕವನಗಳಿವೆ. ದಾಂಪತ್ಯದ ಸುಮಧುರತೆಯಲ್ಲಿ ರಸಸೃಷ್ಟಿಯಾದ ಕವನಗಳು ಸಾಕಷ್ಟಿದೆ.

ಕುವೆಂಪು ತಮ್ಮ 'ನೆನಪಿನ ದೋಣಿ'ಯಲ್ಲಿ ಪ್ರಸ್ತಾಪಿಸಿದಂತೆ ಸಂನ್ಯಾಸದತ್ತ ಒಲುವು ತೋರಿದವರು. ಮದುವೆಯ ನಂತರವೂ ದೀಕ್ಷಾವ್ರತಕ್ಕೆ ಬಂದರು. ಆದ್ದರಿಂದಲೇ ಕುವೆಂಪು ಅವರಿಗೆ ದಾಂಪತ್ಯದ ಲಿಂಗ-ಸಂಗಗಳು, ಶಿವ-ಶಿವೆಯರ ಲೀಲೆ ಎನ್ನಿಸುತ್ತದೆ. 'ಕವಿಗೀ ಸಂಸಾರವೇ ಪೂಜೆ' ಸಹಧರ್ಮಿಣಿ ಜಗನ್ಮಾತೆಯ ಒಂದು ಅಂಶ, ಸಂಸಾರ ಬಂದು ಒಂದು ತಪೋವನ ಎನಿಸುತ್ತದೆ. ಪತಿ-ಪತ್ನಿಯರ ಸಂಬಂಧ ದೈವಿಕ ಅನುಭೂತಿಯತ್ತ ಸಾಗುತ್ತದೆ. ಹರ-ಗಿರಿಜೆ-ಶಿವ-ಶಿವೆಯರ ಆದರ್ಶ ದಾಂಪತ್ಯ ಈ ಪ್ರೇಮಗೀತೆಗಳಲ್ಲಿವೆ. ಸ್ವರ್ಗಾದ್ವಾರದೀ ಯಕ್ಷಪ್ರಶ್ನೆ' ಯಲ್ಲಿ ಪತ್ನಿ ಹೇಮಿಯ ಹೆಸರಿಂದಲೇ ಸ್ವರ್ಗ ಪ್ರವೇಶಕ್ಕೆ ಅನುಮತಿ ದೊರಕುತ್ತದೆ.

ನನ್ನ ದೇವಿ

ಜಗನ್ಮಾತೆ

ಆದಿಶಕ್ತಿ

ಮಹಾಮಾಯೆ

ಅನುತ್ತರಾ

ಓಂ!... (ಅನುತ್ತರಾ) '೨'

ಈ ಎಲ್ಲಾ ನುಡಿಗಳಲ್ಲಿ ಪತಿಗೆ ಶ್ರೀರಕ್ಷೆಯಾಗಿ ನಿಂತ ಪತ್ನಿಯ ಚಿತ್ರಣ ಕಂಡು ಬಂದಿದೆ.

ನಾನಿನಗೆ ನೀನನಗೆ ಜೇನಾಗುವಾ !

ರಸದೇವ ಗಂಗೆಯಲಿ ಮಿನಾಗುವಾ !' (ಜೇನಾಗುವಾ) '೩'

ಪತಿ ಪತ್ನಿಯರ ಮಿಲನಕ್ಕೂ ದೇವಗಂಗೆಯ ಸಾಕ್ಷಿ ಬೇಡುತ್ತಿದೆ ಕವಿರೇವ, 'ಚಂದ್ರಮಂಚಕೆ ಬಾ ಚಕೋರಿ' 'ಷೋಡಶಿಗೆ' 'ಗೃಹದೇವತೆಗೆ' 'ಹೇಮ ರೂಪಸಿಗೆ' ಮುಂತಾದ ಗೀತೆಗಳು ಕುವೆಂಪು ಅವರ ಮಧುರ ಪ್ರಣಯ ಗೀತೆಗಳು ಅವರು ಸತಿಯನ್ನು ಭಗವತಿ ಎಂದು ಕರೆಯುತ್ತಾರೆ. ದಾಂಪತ್ಯದ ಸಂಗದಾಟದಲ್ಲಿ ಕುವೆಂಪು-ಹೇಮಿಯರು, ಶಿವ-ಶಿವೆಯರಾಗುವ ಲೀಲೆಯನ್ನು ಕಾಣುತ್ತಾರೆ. 'ಮನೆ-ಮನೆಯ ತಪಸ್ವಿನಿ' 'ವರ್ಧಿನಿ', 'ಯಕ್ಷಪ್ರಶ್ನೆ', 'ರತಿ' 'ಅಗಸ್ತ್ಯ' ಈ ಮುಂತಾದ ಕವಿತೆಗಳಲ್ಲೂ ಪ್ರೇಯಸಿ ದೇವಿಯಾಗುವ ಕಡೆಗೆ ಒಲವು ಕಂಡುಬರುತ್ತದೆ.

ರಾಮಕೃಷ್ಣಾಶ್ರಮದ ತತ್ವ-ಸಿದ್ಧಾಂತಗಳಲ್ಲಿ ಸಂಪೂರ್ಣ ನಂಬಿಕೆ ಇಟ್ಟು, ಬ್ರಹ್ಮಚರ್ಯವನ್ನು ಆರಾಧಿಸುತ್ತಿದ್ದ ಕುವೆಂಪು ಗೃಹಸ್ಥಾಶ್ರಮದಲ್ಲಿ ಪತ್ನಿಯನ್ನು ಪೂಜ್ಯಳಾಗಿ, ತಾಯಾಗಿ, ದೇವಿಯಾಗಿ ಕಂಡಿದ್ದಾರೆ. ಇದೇ ಧೋರಣೆಯಲ್ಲಿ ಅವರ ಕವನಗಳು ಸೃಷ್ಟಿಯಾಗಿವೆ. ಪ್ರಕೃತಿಯನ್ನು ಕುರಿತ ಕವನಗಳಂತೆಯೇ ಅವರ ಎಷ್ಟೋ ಪ್ರಣಯ ಕವನಗಳೂ ದೊಡ್ಡ ದೊಡ್ಡ ತತ್ವಗಳನ್ನು ಪ್ರತಿಪಾದಿಸುವ ಮಾಧ್ಯಮಗಳಾಗಿವೆ.

ಬೇಂದ್ರೆ ನವೋದಯ ಘಟ್ಟದಲ್ಲಿ ಪ್ರೇಮಕಾವ್ಯಕ್ಕೆ ಹೊಸ ಆಯಾಮ ನೀಡಿದ ಕವಿ. ಪ್ರೇಮದಲ್ಲಿ ಆರ್ಷದೃಷ್ಟಿಯನ್ನಿಟ್ಟ ಕವಿ ಆದರ್ಶದೊಂದಿಗೆ ಕೆಲವೊಮ್ಮೆ ಐಂದ್ರಿಯಕ ವಿವರಗಳೊಂದಿಗೆ ಪ್ರೇಮಕ್ಕೆ ಮೂರ್ತರೂಪ ನೀಡಿದ್ದಾರೆ. **'ಬೇಂದ್ರೆ ಅವರ ಕಾವ್ಯದಲ್ಲಿ ಪ್ರೇಮದ ಪರಿಕಲ್ಪನೆ'** ಈ ಪ್ರಬಂಧದ ವಸ್ತುವಾಗಿರುವುದರಿಂದ ಕುರಿತು ೫ ಮತ್ತು ೬ನೇ ಅಧ್ಯಾಯದಲ್ಲಿ ಹೆಚ್ಚಿನ ವಿವರಗಳನ್ನು ನೀಡಲಾಗಿದೆ.

ಪ್ರೇಮದ ಸ್ವರೂಪವನ್ನು ಶುದ್ಧಾತೀಶುದ್ಧರಾಗಿ ಅರಿತು ಪ್ರಣಯ ಗೀತೆಗಳನ್ನು ರಚಿಸಿದ ಕವಿ ಪು ತಿ ನರಸಿಂಹಾಚಾರ್. ಸ್ತ್ರೀ-ಪುರುಷ ಸಂಬಂಧಗಳ ನೆಲೆಯಲ್ಲಿ ಪುತಿನ ನೈತಿಕತೆಯ ಚೌಕಟ್ಟನ್ನು ಮೀರಿಲ್ಲ. 'ಪ್ರತೀಕ್ಷೆ' ಕವನದಲ್ಲಿ ಮೊದಲ ಪ್ರೇಮದ ಮುಗ್ಧೆಯ ವಿವಿಧ ಭಾವಗಳ ಪರಂಪರೆಯನ್ನೇ ನೇಯ್ದಿದ್ದಾರೆ. ಪ್ರಿಯಕರನ ಬರುವಿಕೆಯನ್ನು ಕಾಯ್ದು ಕುಳಿತ ಪ್ರೇಯಸಿಯ ಕಾಮಕಾತರ-ಅಗಲಿಕೆಯ ವೇದನೆ ಭಾವುಕವಾಗಿ ಚಿತ್ರತವಾಗಿದೆ. ಶೃತಿ ಸೇರದ ಗಂಡ-ಹೆಂಡತಿಯ ಬದುಕು ಒಡೆದ ದೋಣಿಯಾಗದೇ ಇರಲಿ ಎಂಬ ಹಾರೈಕೆಯನ್ನು 'ಅವನು-ಅವಳು', 'ಅವರು' ಕವನಗಳಲ್ಲಿ ಕಾಣಬಹುದು.

"ಪ್ರಣಯವನ್ನು ವಸ್ತುವನ್ನಾಗಿ ಆರಿಸಿಕೊಂಡು ಸಮೃದ್ಧಿಯನ್ನು ತಂದವರು ಕೆ.ಎಸ್. ನರಸಿಂಹಸ್ವಾಮಿ. ಅವರೊಬ್ಬರೇ ಪ್ರಣಯ ಚಿತ್ರಣವನ್ನು ಆದರ್ಶೀಕರಿಸುವುದರ ಮೂಲಕ ಪ್ರಣಯಕ್ಕೆ ಏನೋ ಇಲ್ಲದ ದೈವಿಕತೆಯನ್ನು ತಂದುಕೊಡಬಹುದೆಂಬ ಭ್ರಮೆಗೆ ಒಳಗಾಗದೆ, ಗಂಡು-ಹೆಣ್ಣಿನ ಪ್ರೇಮವನ್ನು, ಗಂಡು

ಹೆಣ್ಣಿನ ಪ್ರೇಮವೆಂಬಂತೆ ಚಿತ್ರಿಸಿ, ಮನುಷ್ಯ ಸಹಜವಾದ ಭಾವನೆಗಳಿಗೆ ಬೆಲೆಯನ್ನು ಎತ್ತಿ ಹಿಡಿದ ಶ್ರೇಯಸ್ಸು ನರಸಿಂಹಸ್ವಾಮಿಯವರಿಗೆ ಸಲ್ಲುತ್ತದೆ."೪ ಹೊಸ ಹರೆಯದ ದಂಪತಿಗಳನ್ನು ಕುರಿತು ದಾಂಪತ್ಯದ ಸೀಮಿತ ಗೀತೆಗಳು ಇವರ ಆಸಕ್ತಿಯ ಕೇಂದ್ರ ಬಿಂದು. 'ಮೈಸೂರು ಮಲ್ಲಿಗೆ' ಸಂಕಲನದಲ್ಲಿ ಮಲ್ಲಿಗೆಯ ಸುಗಂಧದಂತಹ ಪ್ರಣಯವನ್ನು ಕನ್ನಡ ನಾಡಿನ ತುಂಬಾ ಹರಡಿದವರು. ಮಲ್ಲಿಗೆಯಂತಹ ಮೃದು ಮಧುರ-ನವುರಾದ ಶೈಲಿಯ ಪ್ರೇಮ ಗೀತೆಗಳು ಗಂಧರ್ವ ಲೋಕವನ್ನೇ ಸೃಷ್ಟಿಸುತ್ತದೆ. ಒಲುಮೆಯ ಲೋಕದಲ್ಲಿನ ಜೋಡಿಗೆ ಸಾವು ನೋವುಗಳಿಲ್ಲ ಎಂದು 'ಗೃಹಲಕ್ಷ್ಮಿ' ಕವನದಲ್ಲಿ ವರ್ಣಿಸುತ್ತಾರೆ. 'ಪ್ರಶ್ನೆಗೆ ಉತ್ತರ', 'ಒಲುಮೆ', 'ನಿನ್ನ ಹೆಸರು', 'ನೀವಲ್ಲವೆ', ಕವನಗಳಲ್ಲಿ ಪತಿ-ಪತ್ನಿಯರ ಸಾತತ್ಯ, ಪ್ರೀತಿಯ ಒಡನಾಟ, ಒಲುಮೆಯ ಬದುಕನ್ನು ಕವಿ ಸರಳವಾಗಿ ಚಿತ್ರಿಸುತ್ತಾರೆ.

ನವೋದಯ ಸಂದರ್ಭದ ಕವಿಗಳಲ್ಲಿ ಆಡು ನುಡಿಯ ಸೊಗಸಿನೊಂದಿಗೆ ತಮ್ಮದೇ ಆದ ಅನುಕರಣೀಯ ಶೈಲಿಯಲ್ಲಿ ತಮ್ಮ 'ಪುಟ್ನಂಜಿಯ ರೂಪ' ವನ್ನು ವರ್ಣಿಸಿದ್ದಾರೆ ರತ್ನ. ಪುಟ್ನಂಜಿ ರೂಪದ ಸೊಗಸು 'ಚಿನ್ನದ ಭರಣೀಲಿರೋ ಆಲು ಸಕ್ರೆ ತುಪ್ಪ ಇದ್ದಂಗೆ ಎನ್ನುವ ರತ್ನಂಗೆ 'ಯೆಂಡ ಯೆಡ್ತಿ ಕನ್ನಡ ಪದಗಳೇ' ಪ್ರಿಯವಾದ ವಿಷಯ. ಎರಡು ಜೀವಗಳನ್ನು ಬಂಧಿಸಿಡುವ ಒಂದೇ ತಂತಿಯ ಅನ್ಯೋನ್ಯತೆ ಪುಟ್ನಂಜಿ ಹಾಗೂ ರತ್ನರಲ್ಲಿ ಕಂಡುಬರುತ್ತದೆ.

ಜಿ.ಎಸ್. ಶಿವರುದ್ರಪ್ಪನವರು ತನ್ನ 'ಪ್ರಣಯ' ಕವನದಲ್ಲಿ 'ಜೀವಸತಿ ಪರಮಪತಿ' ಎಂಬ ಸನಾತನ ಭಾವನೆಯಿಂದ ವರ್ಣಿಸುತ್ತಾರೆ. ಚೆನ್ನವೀರ ಕಣವಿಯವರು 'ನನ್ನೊಲವು'- ಗೆ 'ನನ್ನ ಹೊಂದಾವರೆ', 'ನನ್ನವಳೀಶರದೃತು' ಕವನಗಳಲ್ಲಿ ಮನೆಯ ಮಂಗಳಮೂರ್ತಿ- ಪಾವನೆ ಸತಿಯ ಕುರಿತು ಭಾವಪೂರ್ಣವಾಗಿ ವರ್ಣಿಸಿದ್ದಾರೆ.

ನವೋದಯದ ಪ್ರಾತಿನಿಧಿಕ ಕವಿಗಳು ಹಾಗೂ ಕವಿತೆಗಳನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ

## ಅಡಿ ಟಿಪ್ಪಣಿ

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧. ಪ್ರಭುಶಂಕರ | ಕನ್ನಡದಲ್ಲಿ ಭಾವಗೀತೆಗಳು | ಡಿ.ವಿ.ಕೆ. ಮೂರ್ತಿ, ಮೈಸೂರು ೨೦೦೦ (ಪು.ಸಂ. ೨೭೯) |
| ೨. ಕುವೆಂಪು | ಅನುತ್ತರ | ಉದಯರವಿ ಪ್ರಕಾಶನ, ಮೈಸೂರು ೧೯೮೫ (ಪು.ಸಂ. ೨೩) |
| ೩. ಕುವೆಂಪು | ಜೇನಾಗುವ | ಉದಯರವಿ ಪ್ರಕಾಶನ, ಮೈಸೂರು ೧೯೮೯ (ಪು.ಸಂ. ೧) |
| ೪. ಶಿವರುದ್ರಪ್ಪ ಜಿ.ಎಸ್. | ನವೋದಯ | ನೆಲಮನೆ ಪ್ರಕಾಶನ, ಮೈಸೂರು ೧೯೭೬, (ಪು.ಸಂ. ೧೪೩, ೧೪೪) |

ಅಧ್ಯಾಯ ೫

# ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮದ ಪರಿಕಲ್ಪನೆ

ಭಾರತೀಯ ಸಾಂಪ್ರದಾಯಿಕ -ದಾಂಪತ್ಯದ ಸ್ಥಾಯಿ ಭಾವದ ಹಿನ್ನೆಲೆಯಲ್ಲಿ ಬೇಂದ್ರೆ ಅವರ ಪ್ರೇಮದ ಪರಿಕಲ್ಪನೆ ಮೂಡಿ ಬಂದಿದೆ. ಬೇಂದ್ರೆ ಅವರ ಪ್ರೇಮದ ನೆಲೆ ವಿಭಿನ್ನ ಸ್ತರಗಳಲ್ಲಿವೆ. ಕವಿ ಒಲವು ಎಂಬ ಪದವನ್ನು ಬಲು ವ್ಯಾಪಕವಾದ ಅರ್ಥದಲ್ಲಿ ಬಳಸಿದ್ದಾರೆ. ಪ್ರೇಮವನ್ನು ಗಂಡು-ಹೆಣ್ಣಿನ ಸಂಬಂಧಗಳಿಗೆ ಮಾತ್ರ ಸೀಮಿತಾರ್ಥದಲ್ಲಿ ಬಳಸದೆ, ವಿವಿಧ ದೃಷ್ಟಿಗಳಿಂದ ಪ್ರಕಟಿಸಿದ್ದಾರೆ. ಪ್ರಕೃತಿ-ಭೂತಾಯಿ, ದೇಶ-ಭಾಷೆ, ತಾಯಿ-ಹೆಣ್ಣು-ಪತ್ನಿ-ಮಗು-ಗೆಳೆಯರು ಹೀಗೆ ವೈವಿಧ್ಯಮಯವಾದ ದಿಕ್ಕಿನಲ್ಲಿ ಪ್ರೇಮ ಹರವು ಹರಡಿಕೊಂಡಿದೆ. 'ಒಲವೇ ನಮ್ಮ ಬದುಕು'ಎಂದವರು ಕವಿ ಬೇಂದ್ರೆ. ಮಣ್ಣು-ಹೆಣ್ಣುಗಳಿಂದ ಆರಂಭವಾದ ಪ್ರೇಮದ ಕಲ್ಪನೆ ಆದಿ ದೈವಿಕದತ್ತ ಸಾಗುತ್ತದೆ. ಈ ಭೂಮಿ ಎಂದರೆ ಮೊದಲಗಿತ್ತಿ, ಈ ಭೂಮಿ ಎಂದರೆ ದೇವನೊಲುಮೆ, ಆದ್ದರಿಂದಲೇ ಪ್ರೀತಿ ಎನ್ನುವುದು ಬೇಂದ್ರೆಯ ಪಾಲಿಗೆ ಆತ್ಮದ ಆಕರ್ಷಣೆ. ಪ್ರೇಮ ಮನುಷ್ಯ ಅಗತ್ಯ ಬಯಕೆಗಳಲ್ಲಿ ಪ್ರಮುಖವಾದುದು. ಕವಿಯ ಪ್ರೇಮ ವ್ಯಾಖ್ಯಾನ ಅನುಭಾವಿಕವಾದದ್ದು. ಪ್ರೇಮ ಸಂಘ ಜೀವನ, ಒಡನಾಟ, ಸ್ಪರ್ಶ, ಆಪ್ತತೆಗಳಲ್ಲಿ ಸೃಷ್ಟಿಯಾಗುವಂತಹದ್ದು.

ಪ್ರಕೃತಿ-ಭೂತಾಯಿ-ತಾಯಿ ಎಂದರೆ ಭಕ್ತಿಪೂರ್ವಕ ಪ್ರೇಮ. ಸೃಷ್ಟಿಸಿದವಳು, ಕಾಪಿಟ್ಟವಳು, ಬೆಳೆಸಿದವಳು ಆದ್ದರಿಂದಲೇ ಭಕ್ತಿ ಪೂರ್ವಕ ಪ್ರೇಮ ಮೊದಲು ಹಸಿರಿತ್ತ ತಾಯಿಗೆ, ನಂತರ ಉಸಿರಿತ್ತ ತಾಯಿಗೆ, ಐದು, ಐದೆಯರ ಮಗನಾದ ಬೇಂದ್ರೆಗೆ ಧಾರವಾಡವೂ ತಾಯಸ್ಥಾನದಿಂದ ವಂಚಿತವಲ್ಲ ಆದ್ದರಿಂದಲೇ ಗದುಗಿಗೆ ಶಿಕ್ಷಕನಾಗಿ ಹೊರಟ ಕವಿ ಧಾರವಾಡ ತಾಯನು,

ನಾವು ಬರ್ತೇವಿನ್ನ ನೆನಪಿರ್ಲಿ ತಾಯಿ
ನಂ ನಮಸ್ಕಾರ ನಿಮಗ
ಕಾಯ್ದಿರಿ ಕೂಸಿನ್ಹಾಂಗ ನಮಗ '೧'

ಎಂದು (ಹಾಡು-ಪಾಡು) ಕವನದಲ್ಲಿ ಅಂತಃಕರಣಪೂರ್ವಕವಾಗಿ ಬೇಡುತ್ತಾರೆ.

ಸ್ವತಃ ಕವಿ ತನ್ನನ್ನು ತಾನು ತಾಯಿ ಅಂಬಿಕೆಯ ಮಗನೆಂದು ಗುರುತಿಸಿಕೊಳ್ಳುತ್ತಾ 'ಅಂಬಿಕಾತನಯದತ್ತ'ನೆಂದೇ ಕಾವ್ಯ ಜಗತ್ತಿಗೆ ಪರಿಚಿತರಾಗುತ್ತಾರೆ,

ತಾಯಿ ಮಾಯೆ ಅಂಬಿಕೆಯೇ ನಿನ್ನ ತನಯ ದತ್ತನು
ನೀನು ಇತ್ತುದಿತ್ತನು
ನಿನ್ನ ಹೆಸರಲ್ಲಿ ನಾನು ಬರೆಯುವುದೇನು ಸೋಜಿಗ !
ತಿಳಿಯಲಾರದೀ ಜಗ '೨'

ಹೆಣ್ಣು ಎನ್ನುವ ಮಾತು ತಾಯಿ ಎನ್ನುವ ಮಾತು ಎರಡಲ್ಲಿ ಒಂದೆಂದು ತಿಳಿಸಿದಳು. (ತಾಯಿ-ಪಾರ್ವತಿ-ಅಂಬಿಕೆ) ತಾಯಿ-ಹೆಣ್ಣು ಎರಡಲ್ಲ ಅದು ಒಂದೆ. ಆದ್ದರಿಂದಲೇ ಕವಿ ತಮ್ಮ ಕಾವ್ಯ ಸಂಭ್ರಮದಲ್ಲಿ ಹೆಣ್ಣಿನ ಕುರಿತು ಮೃಧು ಧೋರಣೆಯನ್ನೇ ತೋರಿದ್ದಾರೆ. ಕೆಲವೊಮ್ಮೆ ಆಕೆ ದೈವಿಕ ಸ್ಥಾನಕ್ಕೇರಿದ್ದಾಳೆ. ಪತಿ-ಪತ್ನಿಯ ದಾಂಪತ್ಯ ಕಾಮವನ್ನು ದೇವ ಕಾಮದೆತ್ತರಕ್ಕೆ ಒಯ್ದಿದ್ದಾರೆ.

ಕವಿ ಬೇಂದ್ರೆಗೆ ಒಲವು ಎಂಬ ಪದದ ಬಗ್ಗೆ ವಿಶಿಷ್ಟವಾದ ಪ್ರೀತಿ ಇದೆ. ಒಲವು ನಮ್ಮೊಳಗೆ ಹೇಗಿರುತ್ತದೆ ಎಂಬ ವಿವರವನ್ನು 'ಒಲವು ಲಿಂಗ'ದಲ್ಲಿ ಹೇಳಿದ್ದಾರೆ.

ಇದ್ದು ಇಲ್ಲದೊಲು ಇದ್ದೀತು ಒಲವು
ಇದ್ದಿಲ ಕಲ್ಲಿನೊಲು
ಅಂತಃ ಸ್ಪರ್ಶ ಎಂತಹ ಹರ್ಷ
ಮೌನದ ಸೊಲ್ಲಿನೊಲು 'ಒ'

ಒಲವೆಂಬುದು ಹೀಗಿರಬೇಕು ಜತಿಯಲಿ ಅರಿದೆನೆ ಕುದುರಬೇಕು ಎನ್ನುತ್ತಾರೆ. ಒಲವು ನೀಡುವ ಹೆಣ್ಣಿನ ನಾನಾ ಮುಖಗಳ ದರ್ಶನವನ್ನು 'ಗಂಡಸು-ಹೆಂಗಸಿಗೆ' ಕಾವ್ಯದಲ್ಲಿ ಗಮನಿಸಬಹುದು. ಕವಿ ತಾನು ಮುದುಕನಾದರೂ ತಾಯಿಗೆ ಮಗನೇ ಎಂಬ ವಾಸ್ತವ ನೆಲೆಯಲ್ಲಿ ಹೆಣ್ಣನ್ನು ನೋಡುತ್ತಾರೆ. ಗಂಡಿಗೆ ತಾಯ ಪ್ರೀತಿ ಸದಾಕಾಲ ಶ್ರೀರಕ್ಷೆಯಾದದ್ದು. ತಾಯ ವಾತ್ಸಲ್ಯ ಭಾವವಿಲ್ಲದ ಗಂಡಿನ ಬದುಕು ಬರಡು. ಹೆಣ್ಣನ್ನು ಕವಿ ಅವಕಾಶ ಸಿಕ್ಕಾಗಲೆಲ್ಲಾ ಉದಾತ್ತೀಕರಿಸಿದ್ದಾರೆ.

ಬೇಂದ್ರೆ ಹೆಣ್ಣು-ತಾಯಿ-ಭೂಮಿ-ಪ್ರಕೃತಿ ಎಂಬ ಸಮೀಕರಣದೊಂದಿಗೆ ಹೆಣ್ಣಿನ ಅನುಭವನ್ನು ಪಡೆಯುತ್ತಾರೆ. ಹೆಣ್ಣು ಅವರ ಬದುಕಿನ ಪಾಲಕ ಹಾಗೂ ಪೋಷಕ ತತ್ವಗಳಾಗಿ ಬಂದಿವೆ. ಬಾಲ್ಯದ ಪ್ರಾರಂಭದ ದಿನಗಳಿಂದಲೂ ಬೇಂದ್ರೆ ಅಜ್ಜಿ ಹಾಗೂ ತಾಯಿಯ ಪೋಷಣೆಯಲ್ಲಿ ಬೆಳೆದವರು. ಪತ್ನಿಯು ತಾಯ್ತನದ ಪ್ರತೀಕವಾಗಿ ಅವರಿಗೆ ಕಾಣುತ್ತಾಳೆ. ಹೆಣ್ಣು ತಾಯ್ತನವನ್ನು ಹೊಂದಿದಾಗಲೇ ಅವಳ ವ್ಯಕ್ತಿತ್ವ ಪರಿಪೂರ್ಣವಾಗುತ್ತದೆ.

ತಾಯೆ ಕನಿಮನೆಯೇ ನೀ ಅಕ್ಕ ಅಕ್ಕರತೆಯೇ
ಬಾಯೆನ್ನ ತಂಗಿ ಬಾ ಮುದ್ದು ಬಂಗಾರವೇ
ನೀ ಯೆನ್ನ ಹೆಂಡತಿಯೋ ಮೈಗೊಂಡ ನನ್ನಿಯೋ
ಮಗಳೋ ನನ್ನೆದೆಯ ಮುಗುಳೋ ?

ಎಂದು ಹೆಣ್ಣಿನ ನಾನಾ ಸ್ವರೂಪಕ್ಕೆ ಅಚ್ಚರಿ ಪಟ್ಟಿದ್ದಾರೆ. ಹೆಣ್ಣು ಏಕ ಕಾಲಕ್ಕೆ ಪೊರೆವ ತಾಯಾಗಿ, ಅಕ್ಕರೆಯ ಅಕ್ಕನಾಗಿ, ವಿಧೇಯ ತಂಗಿಯಾಗಿ, ಕಾಮೇಚ್ಛೇಯಲ್ಲಿ ಭಾಗಿಯಾದ ಪತ್ನಿಯಾಗಿ, ಪ್ರೇಯಸಿಯಾಗಿ, ವಾತ್ಸಲ್ಯದ ಮಗಳಾಗಿ ಕಾಣಿಸಿಕೊಳ್ಳುವ ಅನಂತ ರೂಪಕ್ಕೆ ಹೀಗೆ ವಂದಿಸುತ್ತಾರೆ.

ಈಯೆನ್ನ ಇರವಿಂಗೆ ಬೇವಸದ ಬಾಳಿಕೆಗೆ
ಈಯುತ್ತ ಕೈ-ಮೈಗಳು ಜೀವ ಭಾವದಿಂ
ಸ್ತ್ರೀಯ ಕಾಪಾಡಿದೌ ಪಾಡಾಗಿ ಮೂಢನನು
ತಕ್ಕೈಸಿ ನೂರು ತೆರದಿ

ಬದುಕು ಬೇಸರವಾದಾಗಲೆಲ್ಲಾ ವಿವಿಧ ಬಗೆಯಲ್ಲಿ ಸಾಂಗತ್ಯ ಸುಖವಿತ್ತ. ಸ್ತ್ರೀ ಕುರಿತ ಭಾವ ಇಲ್ಲಿ ವ್ಯಕ್ತವಾಗಿದೆ. 'ಮಂಗ ಮನಸಿನ' ಗಂಡಿಗೆ ಸ್ಫೂರ್ತಿಯಾಗಿ ಹೊಂಗೆಳತಿಯಾದವಳ ಕುರಿತು ಭಕ್ತಿಭಾವವಿದೆ. ಕತ್ತಲೆಯಲಿ ಬೆಂದವಗೆ ಬೆಳಕಾಗಿ ಮಂಗಲೆಯಾಗಿ, ಕಾಂತೆಯಾಗಿ ಶಾಂತಿಯಾದವಳ ಕುರಿತು ಹೆಮ್ಮೆ ಇದೆ. ಗಂಡಿನ ಪಾಲಿಗೆ ಹೆಣ್ಣು ಜಗಜ್ಜನನಿಯು ಆಗಬಲ್ಲಳೆಂಬ ಸಾಧ್ಯತೆಯ ಕಡೆಗೂ ಕವಿ ದೃಷ್ಟಿ ಹೊರಳಿಸುತ್ತಾರೆ.

ಹರೆಯವಳಿಯದ ಜರೆಯೇ ಸಾವೊಂದು ತೋರ್ಪ ಪಿರಿ
ಸೆರೆಯಿಂದ ಸತತ ನೀ ಬಿಡಿಸುವೆ ಜಗಜ್ಜನನಿ
ಶರಣು ಬಂದೆನು ಶರಣ್ಯಳೆ ಹೆಣ್ಣೆ ಸೃಷ್ಟಿಯೇ
ಸಲಹುವೆ ಧರಿತ್ರಿಯಾಗಿ 'ಳ'

ಹೆಣ್ಣಿನ ಕುರಿತಾದ ಅದ್ಭುತವಾದ ಮುಂಗಾಣ್ಕೆ ಇದು.

**೫:೧ ದಾಂಪತ್ಯ ಪೂರ್ವ ಪ್ರಣಯ ಗೀತೆಗಳು**

ಹದಿಹರೆಯದ ಆಕರ್ಷಣೆ ಪ್ರಕೃತಿ ಸಹಜವಾದದ್ದು. ಗಂಡು-ಹೆಣ್ಣು-ನಲ್ಲ-ನಲ್ಲೆಯರಾದಾಗ ಅವರ ನಡುವೆ ನಡೆಯುವ ಸರಸ, ವಿರಸ, ಮುನಿಸು, ಪ್ರಣಯ, ಸಂಕೇತ ಲಲ್ಲೆವಾತುಗಳು ಸಾಮ್ರಾಜ್ಯ ಬೇಂದ್ರೆ ಅವರ ಕಾವ್ಯಗಳಲ್ಲಿ ನಿರ್ಮಾಣವಾಗುತ್ತಿವೆ.

ಹೊಳೆ ದಂಡೆಯ ಮೇಲಿರುವ ನಲ್ಲೆ-ನಲ್ಲರ ಪ್ರಸಂಗ 'ವಾರಿನೋಟ' ಕವನದಲ್ಲಿ ಚಿತ್ರಿತವಾಗಿದೆ. ನೇರ ನೋಟ ನೋಡಲಾರದೆ ವಾರಿ ನೋಟ ನೋಡುವಲ್ಲಿ ಪ್ರಣಯದ ಆಕರ್ಷಣೆ ಮುಂದಾಗಿದೆ. ಈ ಆಕರ್ಷಣೆ ಪರಸ್ಪರರನ್ನು ಸೂಜಿಗಲ್ಲಿನಂತೆ ಸೆಳೆಯುತ್ತಿದೆ. ಅರಳಿರುವ ತಾವರೆಯ ಆಕರ್ಷಣೆಗೆ ತುಂಬಿಯೊಂದು ಹಾಡುತ್ತಿದೆ. ನಲ್ಲೆಯನ್ನು ತಾವರೆಗೂ ನಲ್ಲನನ್ನು ತುಂಬಿಗೂ ಸಮೀಕರಿಸಿದ ಈ ಚಿತ್ರ ಅವರ ಪ್ರಣಯ ಕಾತುರವನ್ನು ವ್ಯಕ್ತಪಿಸುತ್ತಿದೆ.

ಸೂಜಿಗಲ್ಲು ತಿರುಗುತ್ತಿತ್ತೊ ಹೊಳಿಮ್ಯಾಗ
ಸೂಜಿಯೊಂದು ತೇಲುತ್ತಿತ್ತೋ ಹೊಳಿಯಾಗ '೫'

ಎನ್ನುವಲ್ಲಿ ನಲ್ಲ-ನಲ್ಲೆಯರ ನಡುವಿನ ಸೆಳೆತ ವರ್ಣಿತಗೊಂಡಿದೆ. ನಲ್ಲ-ನಲ್ಲೆಯರು ಹೊಳೆಯ ಇಕ್ಕೆಲಗಳಲ್ಲಿ ಕುಳಿತ್ತಿದ್ದಾರೆ. ಹೊಳೆ ಅವರೀರ್ವರನ್ನೂ ಅಗಲಿಸಿದೆ. ಅಗಲಿಕೆ ಪ್ರೇಮಿಗಳ ನಡುವಿನ ನಂಟನ್ನು ಬಿಗಿಗೊಳಿಸಿದೆ. ಅಪ್ಪಟ ಪ್ರಣಯ ಭಾವವನ್ನು ಇದು ಸೂಚಿಸುತ್ತದೆ. ನಲ್ಲ-ನಲ್ಲೆಯರ ಪಾಂಪತ್ಯ ಪೂರ್ವ ಪ್ರೇಮ-ಪ್ರಣಯಗಳ ಸಂದರ್ಭ ಬಂದಾಗಲೆಲ್ಲಾ ಕವಿ ಹುಮ್ಮಸ್ಸಿನಿಂದ ಲವ-ಲವಿಕೆಯಿಂದ ಬಣ್ಣಿಸುತ್ತಾರೆ. 'ರಸಿಕಾ ಪೇಳೋ' ಎಂಬ ಕವನದಲ್ಲಿ ಪ್ರೀತಿಯ ಶುದ್ಧಾತೀಶುದ್ಧ ಅಂತಃಕರಣವನ್ನು ಬಣ್ಣಿಸಿದ್ದಾರೆ. ಕಬ್ಬಿನ ಗಣಿ, ಹುಬ್ಬಿನ ಗೆರೆ, ಚೆಂಬಾಳೆ ಮೈ, ಬಿಂಬಾಧರ, ಬಿದಿಗೆ ಚಂದ್ರಮ ಇವುಗಳೆಲ್ಲಾ ಡೊಂಕು ಆದರೆ ಕಬ್ಬಿನ ರಸ, ಕಣ್ಣಿನ ನೋಟ, ಚೆಂಬಾಳೆಯ ತಿರುಳು, ಬಿಂಬಾಧರದ ಚುಂಬನ, ಬೆಳದಿಂಗಳು ದೋಷ ಮುಕ್ತವಾಗಿವೆ. ಆದ್ದರಿಂದ ಪ್ರೀತಿಯಲ್ಲಿ ನೀನು ಅವಗುಣವನ್ನು ಹುಡುಕಬಾರದು ಎಂದು ಕವಿ ಪ್ರೀತಿಯ ನಿರ್ಮಲ ಗುಣವನ್ನು ವರ್ಣಿಸಿದ್ದಾರೆ.

ಹರೆಯ ಚಿಗುರಡಗಿ ನೆತ್ತರದ ನೆರೆಗಂಪು ಹಳಸುತಿದೆ ಭರದಲಿ

ಹರಕೆ ಕವನದಲ್ಲಿ ಹರೆಯದ ಹೆಣ್ಣಿನ ಜವ್ವನದ ಕುರಿತ ಈ ಮಾತಿನಲ್ಲಿ ಏನೋ ನಿರೀಕ್ಷೆ ಕಂಡು ಬರುತ್ತಿದೆ. ಅವಳನ್ನು ಕಾತುರದಿಂದ ಕಾಯುತ್ತಿರುವ ಪ್ರಿಯಕರ ಅವಳಿಗಾಗಿ ಕಾಯುತ್ತಿದ್ದಾನೆ. 'ಕೈ ನೀಡಿ ಬೆಲೆದು ನಿಂತಿರುವ ಹುಡುಗಿಯ ಕುರಿತು ಪ್ರತೀಕ್ಷೆಗೆ ಕೊನೆ ಹೇಗಿದೆಯೋ ಏನೋ ? ಪರಿಣಾಮ ಏನಾಗುತ್ತದೋ ಏನೋ ಎಂಬ ಸಂದೇಹವೂ ಕಾಡುತ್ತಿತ್ತು. ಅವಳ ಯೌವ್ವನದ ನೆರೆಗಂಪು ಹಳಸದೇ ಇರಲಿ ಎಂಬ ಹಾರೈಕೆಯೂ ಇಲ್ಲಿದೆ. 'ದಿನದ ದಣಿವನು ಕಳೆಯೆ ತಂಗಿ ಹಾರುವ ಹಕ್ಕಿ

ಎರಗದಿರಲಿಲ್ಲ' ಕಚ್ಚಾಡಿಸಲು ಬರದಿರಲಿ
ಹುಡುಗ ಗಾಳಿ, ಅನಾದಿವಂಶದಾ ವೈಭವವೋ
ದಯವ ಮೂಸಿಸಿ ಬಿಡುವ ತುಂಬಿ ಬರದಿರು ನವ ನವೋ
ನವ ಮನೋರಥ ಸಫಲ ಪೊಸ ಬಸಂತನೆ ಬರಲಿ
ನಿನಗೆ ಕಾವಲವಿರಲಿ ನಿನ್ನ ಚಂದ್ರಮ ಚಿಕ್ಕಿ '೬'

ಸಫಲ ಪ್ರಣಯ ಇಲ್ಲಿ ಧ್ವನಿತವಾಗಿದ್ದರೂ ಆತಂಕದ ಭಾವ ನಾಯಕನನ್ನು ಕಾಡುವುದು ಸ್ಪಷ್ಟಗೊಂಡಿದೆ.

'ಕಾಮ ಕಸ್ತೂರಿ' ಕವನದಲ್ಲಿ ನಾಯಕ ತನ್ನವಳಿಗಾಗಿ ಕಾಮ-ಕಸ್ತೂರಿಯ ತೆನೆಯೊಂದನ್ನು ಮುಡಿಸಲು ತಂದಿದ್ದಾನೆ. ತಾನು ತಂದ ಕಾಮ ಕಸ್ತೂರಿಯನ್ನು ಮುಡಿದರೆ, ಅಲ್ಲಿ ಬೀಸುವ ಗಾಳಿ ಕಸ್ತೂರಿಯ ವಾಸನೆಯನ್ನು ತನ್ನ ಮೂಗಿಗೆ ಮುಟ್ಟಿಸಿದರೆ ತನಗೆ, ತನ್ನ ಮನಕ್ಕೆ ಸಿಗುವ ಸುಖದ ವಿವರಕ್ಕಾಗಿ ಕಾದಿದ್ದಾನೆ. ತಮ್ಮಿಬ್ಬರ ಆತುರ ಕಾತುರಗಳನ್ನು ಸಮಾಜ ಹೇಗೆ ಸ್ವೀಕರಿಸುತ್ತದೊ ದ್ವಂದ್ವಕ್ಕೆ ಮನ ನೀಡಲಿಲ್ಲ. ಸಮಾಜದ ಪ್ರತಿಕ್ರಿಯೆಗಳನ್ನು ನಿರಾಕರಿಸಿ ಬಿಡು ಎನ್ನುತ್ತಿದ್ದಾನೆ.

ಅನ್ನೋ ಜನರು ಏನು
ಅಂತ್ಯಾನ ಇರತಾರ
ಹೊರತಾದೆ ನೀ ಜನಕೆ '೭'

ಎಂಬಲ್ಲಿ ಅವನ ಹುಮ್ಮಸ್ಸಿನ ಪ್ರತಿರೋಧವಿದೆ.

ಹೊಸ ಹದಿಹರೆಯದ ಆಕರ್ಷಣೆಯಲ್ಲಿ ಮೈಮರೆತ 'ಪೋರಿ-ಪೋರ'ರು ತಮ್ಮದೇ ಆದ ಲೋಕವನ್ನು ಸೃಷ್ಟಿಸಿಕೊಂಡು ಅದರಲ್ಲಿ ತನ್ಮಯರಾಗುತ್ತಾರೆ. ದುಃಖದ ಸೋಂಕಿಲ್ಲದಂತೆ ಮೈ ಮರೆತ ಜೀವಗಳೆರಡರ ಚಿತ್ರಣ ಇಲ್ಲಿದೆ.

ಪೋರೀ ನೀನು, ನಾನು ಪೋರಾ
ಮಾರಿ ಕಣ್ಣಿಗೆ ಮರುಳರಾಗಿ
ನೆಚ್ಚಿ ಮೆಚ್ಚಿ ಕೂರಿದ್ದೇವ್ಯ
ಆಡಿದ್ದೊಂದ್ಯ ನೋಡಿದ್ದೊಂದ್ಯ
ಹೊಡಿದ್ದೊಂದ್ಯು ಕೂಡಿದ್ದೊಂದ್ಯ
ಬೇರೆ ಮಾತು ನನಗ ನಿನಗ್ಯ
ಗೊತ್ತ್ಯ ಇಲ್ಲಾ । ಗುಟ್ಟು ಶಿವನೆ ಬಲ್ಲಾ

ನಲ್ಲನಿಗೆ ಈ ಪ್ರೀತಿಯ ಬಗ್ಗೆ ಅಗಾಧವಾದ ಅಚ್ಚರಿ. ತಮ್ಮಿಬ್ಬರ ನಡುವಿನ ಪ್ರೀತಿಗೆ ವಿವರ ನೀಡಲಾಗದೆ, ನಾವಿಬ್ಬರೂ ಹೇಗೆ, ಏಕೆ ಮೆಚ್ಚಿಕೊಂಡೆವೋ ತಿಳಿಯದು. ಆ ಗುಟ್ಟನ್ನು ನೀನೆ ಬಿಡಿಸು ಬಾ ಎಂದು ಶಿವನಿಗೆ ಮರೆ ಹೋಗುತ್ತಿದ್ದಾರೆ. ಅಂದ ಮಾತ್ರಕ್ಕೆ ಅಕ್ಕ-ಪಕ್ಕ, ಹಿರಿಯ-ಕಿರಿಯರ ಮಾತುಗಳಿಗೇನೋ ಲೆಕ್ಕಿಸಬೇಕಿಲ್ಲ.

ಹೆಣ್ಣು ಮಣ್ಣು ಹ್ಯಾಳಂತ್ಯ
ಬಣ್ಣಕಡೆ ಬಾಳದಂತ್ಯ
ಬಾಳುವೀ ಸುಳ್ಳಾಟಂತ್ಯ
ಹೆದರಲಿಲ್ಲಾ ! ಯಾರೂ ಹೆದರಿಸಲಿಲ್ಲಾ ೮

ತನ್ನ ಪೋರಿಗೆ ಪೋರ ಓಳಗೆ ಧೈರ್ಯ ನೀಡುತ್ತಾ ತಮ್ಮ ಪ್ರೀತಿಯನ್ನು ಸಮರ್ಥಿಸಿಕೊಂಡಿದ್ದಾನೆ.

ಮಾವು ಚಿಗಿತು ಮಲ್ಲಿಗೆ ಹೂತು
ಸುಗ್ಗಿ ಬಂದು ಮಗ್ಗಿಯೆ ಇರುವಿ
ಕಣ್ಣು ಮುಚ್ಚಿ ನಿನ್ನ ನೆನೆದೇ
ಎದಿ ಮುಗುಳು ತೆರೆಯಲೊಲ್ಲಿ
ಹ್ಯಾಂಗಾರ ಕಣ್ಮನಸೆತ್ತಿ

ಒಮ್ಮೆ ನೋಡ, ಒಮ್ಮೆ ನೋಡ ಎಂದು ಯಾಚಿಸುತ್ತಾನೆ. ಪ್ರೀತಿಗೆ ಪೂರಕವಾದ ಯೋಜನೆ-ತೀವ್ರತೆಗಳೆಲ್ಲಾ ಈ ಕವನದಲ್ಲಿ ಅಭಿವ್ಯಕ್ತಗೊಂಡಿದೆ. ತಾನೆಷ್ಟು ಕೇಳಿದರೂ ಅವನಿಗಾಗಿ ಮರುಗದ ಅವಳ ಬಗ್ಗೆ ಆಕ್ಷೇಪವನ್ನೂ ಎತ್ತಿದ್ದಾನೆ.

ಬಡವರ ಮಗಳಾಗಿ ನೀನು.
ಬಡಿವಾರ ನಿನಗ್ಯಾಕ? ಐವೆಯಿಕ್ಕದೆ ದಿಟ್ಟಿಸಿದರೂ
ಉಗುರದಿಟ್ಟಿ ಇಟ್ಟಿ ನಡೆದಿ

ಇದು ಸರಿಯೇ ಎಂದು ಪ್ರಶ್ನಿಸುತ್ತಾನೆ. ಅವನ ಆಕ್ಷೇಪ ಒಮ್ಮೆ 'ಕಣ್ಮನಸೆತ್ತಿ ನನ್ನ ನೋಡ' ಎಂಬ ಯೋಚನೆಯಲ್ಲಿ ಕೊನೆಗೊಂಡಿದೆ. 'ಜನುಮದ ಜಾತ್ರಿ' ಕವನದಲ್ಲಿ ತನ್ನ ನಲ್ಲನ ಕುರಿತಾದ ಹೆಮ್ಮೆಯ ಮಾತಿದೆ. ಗೆಳತಿಯೊಂದಿಗೆ

ಅಬ್ಬ, ಏನಬೇಡ್ವ ನನ ಗೆಣತಿ ಸಾವಿರಕ
ಒಬ್ಬ ನೋಡವ್ವನನ ನಲ್ಲ'
ಹೇಸಿರಲು ಈ ಜೀವ ಆಸಿ ಹುಟ್ಟಿಸುತ್ತಿತ್ತು
ಬೀಸಿ ಕರೆದಾನ ನನಗಂತ '೧೦'

ಜೀವನವೇ ಬೇಸರ ಎನಿಸಿದಾಗ ಬದುಕಲ್ಲಿ ಆಸೆ ಮೂಡಿಸಿದವನು ನಲ್ಲ ಎಂದು ಸಂತಸದಿಂದ ಹೇಳಿಕೊಂಡಿದ್ದಾಳೆ.

'ಒಂದು ಕ್ಷಣ' ಕವನದಲ್ಲಿ ತಾವು ಪರಸ್ಪರರು 'ಒಂದು ಕ್ಷಣ' ಕಂಡ ತಪ್ಪಿಗೆ ಪರವಶತೆಯ ಮೈ ಮರೆವಿನಲ್ಲಿ ಲೀನವಾಗಿದ್ದರ ಕುರಿತು ವಿವರಿಸುತ್ತಾರೆ.

ಒಂದು ಕ್ಷಣ ಕಂಡ ತಪ್ಪಿಗೆ
ಎಂದಿನ ತನಕಾ ಕೊರಗೋದ

ಕೊರಗೋದ್ವ ಮತ್ತ ಸೊರಗೋದ' ಪ್ರೀತಿಯಲ್ಲಿನ ಎರಡು ಜೀವ ಒಂದಾದರೆ ಸಂತಸ ಇಲ್ಲವಾದರೆ ವಿರಹದ ಬೆಂಕಿಯಲ್ಲಿ ನೋಯುವ, ಸೊರಗುವ, ಬೇಗೆ ತಪ್ಪಿದ್ದಲ್ಲ. ಅಗಲಿಕೆಯ ನೋವು "ಸಾವ್ವ ಮೇಲು ಅಂದೇನ್ವ ಅಂದೇನ್ವ ಮತ್ತು ಮುಂದೇನ್ವ" ೧೧

ಎಂಬ ದಿಕ್ಕೆಡಿತನವನ್ನು ಸೃಷ್ಟಿಸಿದೆ. ಪ್ರೇಮಕ್ಕೆ ಒಳಗಾದ ನಲ್ಲ ಕವನ ಕಟ್ಟಿದ್ದಾನೆ. 'ದವನ-ಕವನ' ದ ನಾಯಕ ತನ್ನ ಪ್ರೀತಿಯ ನೆಪವನ್ನು ದವನಕ್ಕೆ ಹೋಲಿಸಿಕೊಂಡಿದ್ದಾನೆ. 'ಗೆಳೆಯ-ಗೆಳತಿ'ಯರ ಪರಸ್ಪರ ಮಿಲನ ಪ್ರಕೃತಿ ಧರ್ಮ ಎನ್ನುವುದನ್ನು ಸೂಚಿಸುವ 'ಗೆಳತಿ' ಕವನ ಪ್ರಣಯಕ್ಕೆ ಪೂರಕವಾಗಿ ರಚಿತವಾಗಿದೆ.

ಪ್ರಣಯದಲ್ಲಿ ಸಮ್ಮಿಲನಗೊಳ್ಳಲು 'ಜೀವ ಬಿಗಿ' ಹಿಡಿದು ಕಾದು ಕುಳಿತ ನಲ್ಲ-ನಲ್ಲೆಯರಿಗೆ ಬೇಕೋ-ಬೇಡವೋ ಎಂಬ ಜಿಜ್ಞಾಸೆ ಕಾದಿದೆ.

ಕುಹೂಽ ಕುಹೂಽ ಕುಹೂಽ
ಮೈ ತುಂಬ ಮಾವು ಹೂಽಹೂಽ
ಒಳ ಹೊರಗು ಹೂತೆವೇ ನಾವೂಽ
ತುಟಿ ತುಟಿಗೆ ಮುತ್ತನೊತ್ತಿಽಽ
ಜೇನ್ನುಡಿಯ ಬೀಜ ಬಿತ್ತಿಽಽ
ಮಧು ಚಂದ್ರನ ಸ್ವಪ್ನವನೆತ್ತಿಽ
ಸುಳಿದಾಡುತ್ತಿತ್ತು ಸುತ್ತೂ ಬೇಕೆಂಬಾಸೆ '೧೨'

ಹೊಂದಲು ಸಂಕೋಚ ಕೊನೆಗೂ ಪರಸ್ಪರ ಮಿಲನ ಸಾಧ್ಯವಾಗಲೇ ಇಲ್ಲ 'ಊಂಹೂಽ ಉಂಹೂಽ ಊಂಹುಽ' ಅಗಲಿಕೆಯೇ ಸ್ಥಾಯಿಯಾಗುವ ಚಿತ್ರಣ ಇಲ್ಲಿದೆ.

ಪ್ರೀತಿ ಹೃದಯದ ಅನುಭೂತಿ. ಈ ಪ್ರೀತಿಯನ್ನು ಅಷ್ಟು ಇಷ್ಟು ಎಂದು ವಿಭಾಗಿಸಲು, ಅಳೆಯಲು, ಪ್ರಮಾಣ ನೋಡಲು ಸಾಧ್ಯವಿಲ್ಲ. ಪ್ರೀತಿ ಹಗಲಿನ ಕಿರಣಗಳಂತೆ. ಭೂಮಿಗೆ ಎಷ್ಟು ಪ್ರಾಪ್ತವಾಗಬೇಕೋ ಅಷ್ಟೇ ಲಭ್ಯ. ಅದನ್ನು ಮೀರಿ ನಾವು ಏನನ್ನೂ ಬಯಸುವಂತಿಲ್ಲ. ಎಂದು

ಒಲಿದು ಒಲಿಸಿ ಸುಖಿವಿರು
ಮರದ ಅಡಿಗೆ ಗುಡಿಸಲಿರಲಿ
ಅಲ್ಲಿ ಒಲವು ಮೆರೆಯದೇ
ನಲಿವು ಮೇರೆವರಿಯದೇ '೧೩'

ಅಷ್ಟು ಪ್ರೀತಿ ಇಷ್ಟು ಪ್ರೀತಿ, ಕವನದಲ್ಲಿ ಹೀಗೆ ಹೇಳಿದ್ದಾನೆ. ಮನಸ್ಸಿಗೆ ಸ್ಪಂದಿಸುವ ಶಕ್ತಿ ಇದ್ದಾಗ ಮಾತ್ರ ಒಲುಮೆ ಮೂಡಲು ಸಾಧ್ಯ. ಒಲುಮೆಯ ಮುಂದೆ ಯಾವುದೇ ವೈಭವ ಸರಿ ಸಮನಲ್ಲ ಎಂಬುದು ಕವಿಯ ಆಶಯ. ಒಲವಿನ ಬಗ್ಗೆ ಎಷ್ಟೇ ತಿಳಿದರೂ ಕವಿಗೆ ಅದಮ್ಯ ಕುತೂಹಲ. ಇದು ಎಲ್ಲಿಂದ ಬಂತು? ಗುಟ್ಟಿನ ಮೂಟೆ ಬಿಚ್ಚುವುದು ಹೇಗೆ? ಒಲವು ಮೋಹವಾಗಿ ಹೆಣ್ಣಲ್ಲಿ ನಿಂತು ಕಣ್ಣುಳಿಸಿ. ಮನ ಕುಣಿದಾಡಿಸುವಳು.

ಹೀಗೆ ಸಾಗಿಹುದೇಕೋ ಮೋಹಲೀಲೆ ?
ಎಂದಿಗೂ ಏಗಳೂ ಇತ್ತು ರಮ್ಯ
ಇಂದಿಗೂ ಈಗಲೂ ಇಹುದಗಮ್ಯ '೧೪' ಎಂದು ಅಚ್ಚರಿ ಪಡುತ್ತಿದ್ದಾರೆ.

ಇದು ಅನಂತಗಾನ, ಅಂತ್ಯವಿರದ ಪ್ರಕೃತಿಧರ್ಮ ಎಂಬ ನಿಲುವಿಗೆ ಬಂದು ಕವಿ ಪ್ರೇಮದ ನಾನಾ ಸ್ವರೂಪಗಳನ್ನು ಕುತೂಹಲದಿಂದ ಶೋಧಿಸಿದ್ದಾರೆ. ಪ್ರೇಮ ಒಲವು, ಸ್ನೇಹಗಳೆಲ್ಲಾ ಕೊಟ್ಟಷ್ಟೇ ಕೊಂಬುವುದು. ಒಲವಿನ ತಾಯಿಗೆ ಒಲವನ್ನು ಮಾತ್ರ ಸೃಷ್ಟಿಸಲು ಸಾಧ್ಯ. ಕವಿ ಈ ಒಲವಿನ ಹರಹನ್ನು ರವಿ-ಶಶಿಯರ ಕಂಪು-ತಂಪುಗಳಲ್ಲಿ 'ಜೀವ ದಿವ್ಯಗಾನ'ದಲ್ಲಿ ಗಮನಿಸಿದ್ದಾರೆ ನಲಿವು ಒಲವುಗಳೆ ಬದುಕಿಗಾಧಾರ ಎಂಬ ಒಲುಮೆಯ ತತ್ವವನ್ನೇ ಕವಿ ಸದಾ ಬೋಧಿಸುತ್ತಾರೆ. ಕೊಟ್ಟು-ಕೊಂಡು ಬೆಳೆವುದೆಲ್ಲಾ.

ಪ್ರೇಮಕಲ್ಪದಲ್ಲಿ
ಹಾವೊಳಿಲ್ಲಿ ಚಿಕ್ಕೆಯಲ್ಲಿ
ಜೀವ ಜಾತದಲ್ಲಿ
ಜಗದ ಮೂಲವೆಂಬೀ
ಒಲವಿನಲ್ಲೇ ತುಂಬಿ '೧೫'

ಎಂಬ ತತ್ವವನ್ನು ಕೊಡುವುದೇನ್ನೂ ಕೊಂಬುವುದೇನು? ಕವನದಲ್ಲಿ ವಿವರಿಸಿದ್ದಾರೆ. 'ಪ್ರೇಮ ಬೀಜ'ಎಂಬ ಕವನದಲ್ಲಿ ಪ್ರೇಮ ಸ್ವರೂಪದ ಮೂಲ ತತ್ವ ವ್ಯಕ್ತವಾಗಿದೆ.

'ಪ್ರೇಮ ಬೀಜ ಮೂಲ ನಿನಗೆ

ಪ್ರೇಮ ಬೀಜ ಫಲದ ಗೊನೆಗೆ '೧೬' ಮೂಲ ಪ್ರೇಮ ಬೀಜಗೊನೆಯಾಗಿ ಸಮೃದ್ಧಿಯಾಗುವ ವಿವರ ಇಲ್ಲದೆ.

ನವೋದಯ ಸಂದರ್ಭದಲ್ಲಿ 'ಪ್ರೇಮದ ಪರಿಕಲ್ಪನೆ ' ವ್ಯಕ್ತಿತ್ವದ ಶೋಧನೆಯಾಗಿ ಪ್ರಕಟಗೊಂಡಿದೆ. 'ಪ್ರೀತಿ-ಒಲವು' ಪರಸ್ಪರ ವ್ಯಕ್ತಿತ್ವ ಶೋಧನೆಗೆ ಗುರಿಯಾಗುವ ಮುಖ್ಯ ಅಂಶವಾಗಿದೆ. ಪ್ರೇಮದ ಆಕಾಂಕ್ಷೆ ಒಳಿತಿಗಾಗಿ ಮೀಸಲು. ವಿಭಿನ್ನ ನೆಲೆಗಳಲ್ಲಿ ಆವಿಷ್ಕಾರಗೊಳ್ಳುವ ಈ ಪ್ರೇಮದ ಮೂಲ ಉದ್ದೇಶವೇ ಲೋಕ ಕಲ್ಯಾಣ. ಪ್ರೇಮದ ನೆಲೆ -ಅಭಿವ್ಯಕ್ತಿಗಳು ವಿಭಿನ್ನ ಸ್ವರೂಪಗಳನ್ನು ಹೊಂದಿದ್ದರೂ, ವ್ಯಕ್ತಿಯ ವ್ಯಕ್ತಿತ್ವದ ನೆಲೆಗೆ ಬದುಕನ್ನು ಬೆಲೆಯಗೊಡುವ ಅರ್ಥಪೂರ್ಣ ಅಂಶವೇ ಆಗಿದೆ. ವ್ಯಕ್ತಿ-ಪ್ರಕೃತಿ, ದೇವ-ಭಕ್ತ, ತಾಯಿ-ಮಗು, ನಲ್ಲ-ನಲ್ಲೆ, ಸತಿ-ಪತಿ, ಸಖಿ-ಸಖ, ಗೆಳೆಯ-ಗೆಳತಿಯರ ಸಡುವಿನ ಸಂಬಂಧಗಳಲೆಲ್ಲಾ ವಿಭಿನ್ನ ನೆಲೆಗಳನ್ನು ಪರಿಭಾವಿಸಬಹುದಾಗಿದೆ. ಒಲವಿನ ನಿಲುವು ಎಂಬ ಗೀತೆಯಲ್ಲಿ ಕವಿ ಪ್ರಕೃತಿ ಹಚ್ಚ ಹಸಿರಾಗಿ ಅರಳಿ ನಗಲು, 'ಮಳೆ ಪುರುಷ'ನ ಅನಿವಾರ್ಯತೆ ಇದ್ದಹಾಗೆ, ವ್ಯಕ್ತಿ ಜೀವನ ಸಮೃದ್ಧವಾಗಲು ಒಲವಿನ ಚೆಲುವು ಅನಿವಾರ್ಯ ಎಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ.

ಒಲವಿನಲ್ಲಿ ಬೆಳಿ, ಒಲವಿನಲ್ಲಿ ಉಳಿ, ಒಲವೆ ಬಾಳ ಚೆಲುವು
ಒಲ್ಲದಿಲ್ಲ, ಒಲಿಯುವುದ ಎಲ್ಲ ಒಲಿಯುವುದೇ ಬದುಕು-ಒಲವು
ಇದು ನೇತಿಯಲ್ಲ, ಇತಿ ಪ್ರೀತಿ,
ಸ್ವಾತಿ ಮೌಕ್ತಿಕದ ದೈವ ಭುಕ್ತಿ! '೧೬'

ಮಳೆಯ ಹನಿಗಳೆಲೆಲ್ಲಾ ಹೇಗೆ ಸ್ವಾತಿ ಮುತ್ತಾಗಲಾರದೋ ಹಾಗೆಯೇ ಒಲವನ್ನು ಹೊಂದಿದ ಎಲ್ಲರೂ ದೈವಭುಕ್ತಿಗೆ ಪಾತ್ರರಾಗಲಾರರು. ಒಲವಿಗೆ ಒಲಿಯಬಲ್ಲವರು ಒಲವೇ ಒಲವೆಂಬುವರು ಒಲುಮೆಗಾಗಿ ಬದುಕಬಲ್ಲರು.

ಒಲವೆಂಬುದು ಆಂತರಂಗಿತವಾದ ಅನುಭೂತಿ. ವೈಯಕ್ತಿಕ ಬದುಕಿನ ಈ ಒಲವನ್ನು ಸಾರ್ವಜನಿಕವಾಗಿ ಚರ್ಚಿಸಬಾರದು. ಒಲವಿಗೆ ಬೆಲೆ ಕಟ್ಟಲಾಗದು. 'ಒಲವೆಂಬ ಹೊತ್ತಿಗೆ' ಎಂಬ ಕವನದಲ್ಲಿ ಕವಿ ಒಲವಿನ ಬೆಲೆಯ ಕುರಿತು ಹೇಳುತ್ತಾರೆ.

ಒಲವೆಂಬ ಹೊತ್ತಿಗೆಯನೋದ ಬಯಸುತ ನೀನು
ಬೆಲೆಯೆಷ್ಟು ಎಂಬು ಕೇಳುತಿಹೆ ? ಹುಚ್ಚ!
ಹಗಲಿರುಳು ದುಡಿದರೂ ಹಲ ಜನುಮ ಕಳೆದರೂ
ನೀ ತೆತ್ತಲಾರೆ ಬರೀ ಅಂಚೆವೆಚ್ಚ

ಒಲವಿಗಾಗಿ ಹಪ-ಪಹಿಸಿದವರೂ ಕಣ್ಣೀರಿಟ್ಟವರೂ ಲೆಕ್ಕವಿಲ್ಲದಷ್ಟು ಆದ್ದರಿಂದ ಹೃದಯ ಸಂಪುಟದಲ್ಲಿ ಒಲವ ಲೆಕ್ಕಣಿಗೆ ಮಾಡಿ. ಒರೆಯಲೋ ಹುಡುಗ ನಿನ್ನ ಒಕ್ಕಣಿಕೆ '೧೭'

ಎಂದು ಒಲವು ಪ್ರೀತಿಯ ಹಾದಿ ಎನ್ನುತ್ತಿದ್ದಾರೆ.

'ಅಮೃತ ಕಳಸದಲ್ಲಿ ಮೋಹಿನಿ ರೂಪವು
ಪ್ರತಿಬಿಂಬಿಸಿದಂದು
ಆ ಪ್ರತಿ ಬಿಂಬವು ಬಿಂಬದ ಕಾಮಿಸಿ
ಬಂದಿತು ಮೈಗೊಂಡು
ಈಕೆಯೇ ಕಾಮೋದೆ

ಕಾಮೋದೆ ಹಾಗೂ ಶ್ರೀ ನಾರಾಯಣನ ಅನನ್ಯತೆ ನೀರಾಗಲು ಅದು ರುಚಿಯಾಯಿತು ಇದು

ಬೆಳಕಾಗಿ
ಹೂವಿಗೆ ಕಂಪು ಗಾಳಿಗೆ ತಂಪು
ಅಸುವಿಗು ಕಸುವಾಗಿ
ಅತುಲ ಸತಿಯಾಗಿದ್ದಾಳೆ '೧೮'

ಇಂತಹ ನಿರಂತರದ ಈ ಅನಂತ ಪ್ರಣಯವು ನಡೆದಿದೆ ಎಂದೆಂದೂ ತಂತಮ್ಮೊಲವಿನ ಚೆಲುವರಸುತ್ತಿದೆ ಜೀವವು ಒಂದೊಂದು ಕೃಷ್ಣ ಕಾಮೋದೆಯರ ಜೀವಾಳ ಬಾಳಾಗಿ ಅನಂತ ಪ್ರಣಯವಾಗಿ ಈ ಭೂಮಿಯನ್ನು ರಮಿಸುತ್ತಿದೆ ಎನ್ನುವ ಕವಿ, ರವಿ ಕಾಣದ್ದನ್ನು ಸೃಷ್ಟಿಸಿದಾತ. ಈ ದೇವ ಪ್ರೇಮ, ಪರಸ್ಪರ ಬಿಂಬ ಪ್ರತಿ ಬಿಂಬಗಳಾದ ಕೃಷ್ಣ-ಕಾಮೋದೆಯರ ಬದುಕು ಜೀವ ಪ್ರಪಂಚದ ತತ್ವವಾಗಿದೆ.

### ೫:೨: ದಾಂಪತ್ಯ ಗೀತೆಗಳು

ಕಾಮ ಭಾವವೇ ಪ್ರಧಾನವಾದ ಗಂಡು-ಹೆಣ್ಣಿನ ದಾಂಪತ್ಯ ಸಂದರ್ಭ ಪ್ರೇಮ ಭಾವವಾಗಿ ಮಾಗುವ ಕ್ರಿಯೆ ಬೇಂದ್ರೆ ಕಾವ್ಯಗಳಲ್ಲಿ ಹಂತ ಹಂತವಾಗಿ ಕಾಣಿಸಿಕೊಂಡಿದೆ. ಹೆಣ್ಣನ್ನು ಮೊದಲು ತಾಯಿಯಾಗಿ, ಸೋದರಿಯಾಗಿ, ಅಪರಿಚಿತ ದೇಹ ಸೌಂದರ್ಯವಾಗಿ ಮತ್ತೆ ತಾಯಾಗಿ ನೋಡುವ ಗಂಡು ಇವೆಲ್ಲಾ ಭಾವನೆಗಳ ನಡುವೆ ಲೈಂಗಿಕ ಆಕರ್ಷಣೆ - ಪ್ರೇಮವಾಗಿ -ವಾತ್ಸಲ್ಯವಾಗಿ ಪರಿವರ್ತಿತವಾಗುವ ಅನೇಕ ಕಾವ್ಯಗಳು ದಾಂಪತ್ಯ ಗೀತೆಗಳ ಸಾಲಿಗೆ ಸೇರ್ಪಡೆಯಾಗಿವೆ. ಕಾಮಿ ಗಂಡನ್ನು ಪ್ರೇಮಿಯನ್ನಾಗಿಸುವ ಹೆಣ್ಣು '-ಗೆ' ಕವಿತೆಯಲ್ಲಿದ್ದಾಳೆ.

ಕಾಮುಕನು ನಾನೆಂದು ಪ್ರೇಮ ದೇವತೆ ನೀನು
ಬೆಂಬದಿಗೆ ನಿಂತೆ - ಬಾಗಿ
ರಾಮಣೀಯಕ ರೂಪ ಮುಂಬದಿಗೆ ಬಂದಿರಲು / ಉಳಿಯುವೆನೆ ಕಾಮಿಯಾಗಿ ? '೧'

ಕಾಮುಕನನ್ನು ಪ್ರೇಮ ಮಯಿಯನ್ನಾಗಿಸುವ ಧೀಶಕ್ತಿಯುಳ್ಳವಳು ಹೆಣ್ಣು ಎಂಬ ಪಾವನ ಭಾವ ಇಲ್ಲಿ ವ್ಯಕ್ತವಾಗಿದೆ. ಗೆ - ೧ ಗೆ - ೨ ಗೆ - ೩ ಗೆ - ೪ ಗೆ - ೫ ಗೆ - ೬ ಇಷ್ಟೂ ಕವನಗಳಲ್ಲಿ ಬೇಟ - ಬೆಡಗುಗಳಿಗೆ ಮೈ ಮನ ಸೋತ ಗಂಡು ತನ್ನನ್ನು ಆಮಿಷಗಳಿಂದ ಮುಕ್ತಿಗೊಳಿಸಿ ಎಂದು ಬೇಡುತ್ತಿದ್ದಾನೆ. ತಾನು ಜಾರದಿರಲು

"ಬಾಯ್ಬಿಟ್ಟು ಕಣ್ಬಿಟ್ಟು ಕೈ ನೀಡಿ ಕೈ ಮಾಡಿ
ಕರೆಯುವೆನು ಲಜ್ಜೆ ತೊರೆದು

ತಾಯ್ಬಾರೆ - ಎಂದು ಕರೆಯುವ ಕೂಸಿನಂತೀಗ ಅತ್ತೂ ಕರೆದು ಬೇಡುತ್ತಿದ್ದಾನೆ (-ಗೆ ೨) - ೨

"ಧರ್ಮ ಪತ್ನಿಯ ದೇಹ ಧರಿಸಿ ಬಂದಿಹೆ ನೋಡು ಆಡು-ಮುದ್ದಾಡು ಒಮ್ಮೆ" (-ಗೆ ೩) - ೩

"ಇತ್ತೆ ಮುದ್ದಿನ ಮುದ್ದೆಯನ್ನು ರೂಪಿಸು, ಅಮ್ಮ ತಿರುಗಿಸುತ್ತೆನ್ನಾತ್ಮ ತಿಗರಿಯಂತೆ" (-ಗೆ೪) -೪

ಎಂದು 'ಅಮ್ಮ ನ ಮೂಲಕ ತನ್ನ ಆತ್ಮ ನಿಷ್ಠೆಯನ್ನು ಬಲಗೊಳಿಸುತ್ತಿದ್ದಾರೆ. ಪತ್ನಿಯನ್ನು ತಾಯಾಗಿ ನೋಡಿ ತನ್ನನ್ನು ರಕ್ಷಿಸು ಎನ್ನುತ್ತಿದ್ದಾನೆ. 'ಪೆಣ್ಣು ಇದ್ದಲ್ಲೆಲ್ಲಾ ಪೆಂಪು ಇರುವುದು' ಎಂಬ ನಂಬುಗೆಯೇ ಕವಿಗೆ ಬಾಳಿನಲ್ಲಿ ಧೈರ್ಯವನ್ನು ಮೂಡಿಸಿದೆ. ಪತ್ನಿಯನ್ನು ಒಮ್ಮೆ ಅಕ್ಕ ಬಾರೆ ಎನ್ನುತ್ತಾ, ತಂಗಿ ಪೊರೆಯ ಎಂದು ಕರೆಯುತ್ತಾ, ಅಮ್ಮ ಎಂಬು ಭಾವಕ್ಕೆ ನಮಿಸುತ್ತಾ ತನ್ನಲ್ಲಿನ ಕಾಮವನ್ನು ಪ್ರೇಮದ ಪಕ್ವತೆಯತ್ತ ಮಾಗಿಸಿದ್ದಾರೆ.

ನವೋದಯ ಸಂದರ್ಭದ ಕವಿಗಳ ಪ್ರೇಮ ಕಾವ್ಯಗಳನ್ನು ಗಮನಿಸಿದರೆ ಬೇಂದ್ರೆ ಹೊರತಾಗಿ ಇನ್ನಾರೂ ಲೈಂಗಿಕ ವಿಷಯಗಳನ್ನು ವರ್ಣಿಸಿಲ್ಲ. ಐಂದ್ರಿಕ ವಿಷಯಗಳ ಮೂಲಕ ಪ್ರೇಮವನ್ನು ಬಣ್ಣಿಸಿದ ಏಕೈಕ ಕವಿ ಬೇಂದ್ರೆ. ಉಳಿದ ನವೋದಯ ಕವಿಗಳಿಗಿಂತ ಭಿನ್ನ ಆಯಾಮಗಳಲ್ಲಿ ಪ್ರೇಮ ಕಾವ್ಯಗಳು ಬೇಂದ್ರೆ ಅವರಿಂದ ರಚಿತಗೊಂಡಿವೆ ಪ್ರೇಮ ವಿರಹಿತವಾದ ಕಾಮದ ಬಗ್ಗೆ ಬೇಂದ್ರೆ ಅವರಿಗೆ ಗೌರವವಿರಲಿಲ್ಲ. ಸ್ವತಃ ಬೇಂದ್ರೆ ಈ ಕುರಿತು 'ಕಾಮವು ಕಸ್ತೂರಿಯಂತೆ ಒಕ್ಕಾಲು ಮದ, ಮುಕ್ಕಾಲು ಮಣ್ಣು ಆದರೂ ಮಗ ಮಗಿಸುವ ಸವಿಗಂಪು, ಕಾಮ ಪ್ರೇಮ, ಕೆಸರು ಕಮಲ ಇದ್ದಂತೆ" ೫ ಎಂದಿದ್ದಾರೆ.

ಸ್ತ್ರೀ-ಪುರುಷ ಸಂಬಂಧಗಳ ವಿವಾಹ ಪೂರ್ವ ಮತ್ತು ವಿವಾಹೋತ್ತರ ನೆಲೆಗಳನ್ನು ಕುರಿತಂತೆ, ಕಾಮ ಪ್ರೇಮಗಳ ಸಂಕೀರ್ಣ ಸಂಯೋಜನೆಯನ್ನು ಕುರಿತಂತೆ ಹಲವಾರು ಸಫಲ ಕವನಗಳನ್ನು ರಚಿಸಿದ್ದಾರೆ. 'ಸಖೀಗೀತ', 'ಕಲ್ಪವೃಕ್ಷ', 'ವೃಂದಾವನಗಳಲ್ಲಿ', 'ಮಾಯ ಕಿನ್ನರಿ', 'ಕುಣಿಯೋಣ ಬಾರಾ' ಮುಂತಾದ ಕವನಗಳಲ್ಲಿ ಶಾರೀರಿಕವಾದ ಕಾಮವನ್ನು ಕ್ಷುಲ್ಲಕವೆಂದು ಪರಿಗಣಿಸಿ ಆದರ್ಶೀಕೃತ ಪ್ರೇಮವನ್ನು ವೈಭವೀಕರಿಸುವ ಕೆಲಸದಲ್ಲಿ ಬೇಂದ್ರೆ ಅವರು ತೊಡಗುವುದಿಲ್ಲ ಕಾಮದ ಶಕ್ತಿ ದಮನೀಯವಾದುದಲ್ಲ ದಾಂಪತ್ಯ ವ್ಯವಸ್ಥೆಯ ಒಳಗಿನ ಆರೋಗ್ಯಕರವಾದ ಕಾಮದ ಅಭಿವ್ಯಕ್ತಿ ನೈತಿಕ ಮೌಲ್ಯವುಳ್ಳದ್ದು, ದಾಂಪತ್ಯದ ಚೌಕಟ್ಟಿನಲ್ಲಿ ಕಾಮ ಪ್ರೇಮವಾಗಿ ಮಾಗುವ ಪ್ರಕ್ರಿಯೆ ಅತ್ಯಂತ ಗೌರವಯುತವಾದದ್ದು. ಗೌರವಯುತವಾದ ಕಾಮ ಸೃಜನಶೀಲವಾದದ್ದು, ಕಾಮವನ್ನು ಒಟ್ಟು ಬದುಕಿನಿಂದ ಪ್ರತ್ಯೇಕಿಸಬಾರದು ಎಂಬ ನಂಬುಗೆಯ ಹಿನ್ನೆಲೆಯಲ್ಲಿ ಕೆಲವೊಂದು ಕಾವ್ಯಗಳಲ್ಲಿ ದಾಂಪತ್ಯ ಕಾಮ ಚಿತ್ರಿತವಾಗಿದೆ.

ಬಾಳೆಂಬ ಕುಣಿತದಲ್ಲಿ ಜೊತೆ ಸೇರಿ ಹೆಜ್ಜೆ ಹಾಕೋಣು ಬಾ ಎಂದು ಸಖಿಯನ್ನು ಆಹ್ವಾನಿಸುವ ಚಿತ್ರ-ಕುಣಿಯೋಣು ಬಾರ ಕವನದಲ್ಲಿದೆ

'ಕುಣಿಯೋಣು ಬಾರs
ಕುಣಿಯೋಣು ಬಾ
ಇರಲಾರೆನೇಕಾಕಿ
ಬಾ, ಬಾರs ನನ್ನಾಕೆ ಕುಣಿಯೋಣು ಬಾರs

ಕುಣಿಯೋಣು ಬಾ, ಎಂದು ನಲ್ಲೆಯನ್ನು ಕರೆಯುತ್ತಿದ್ದಾನೆ. ಬಾಳಿನಲ್ಲಿನ ಗೋಳಾಟಗಳು, ತಿಣುಕಾಟಗಳು, ಬ್ಯಾಸರ, ನಿಟ್ಟುಸಿರು, ದುಃಖಗಳು ಸಾವು-ನೋವುಗಳ ಮಲೆತು ಕುಣಿಯೋಣ ಬಾ ಎಂದು ನಲ್ಲೆಗೆ ಕುಣಿತದ ಸುಖಕ್ಕೆ ಪ್ರೇರೆಪಿಸುತ್ತಿದ್ದಾರೆ. ಇಡೀ ಜೀವನವನ್ನೇ ನಾಟ್ಯವನ್ನಾಗಿಸಿಕೊಂಡು ತಾಳ-ತಂತಿಗಳ ತೊರೆದು

'ಚಿಗರ್‍ಯಾಗಿ

ತಿಗರ್‍ಯಾಗಿ

ನಿದ್ದೀಯ ಭಗರ್‍ಯಾಗಿ

ಗಾಳೀ ಗೂಹಗುರಾಗಿ

ಕೈ ಮೈ ಬೀಸಾಡ್ರಿ

ಬೆವರ್‍ಹನಿ ಸೂಸಾಡಿ ಕುಣಿಯೋಣು ಬಾರs ಕುಣಿಯೋಣು ಬಾs '೬'

ಎಂದು ಕರೆಯುತ್ತಾ, ಕುಣಿತಕ್ಕೆ ಇತಿ, ಮಿತಿ ಇಲ್ಲ ಕುಣಿತದಿಂದ ಸಿಗುವ ಸಂತೃಪ್ತಿ, ಆನಂದ ಸಾಗರದಂತೆ 'ತೆರಿ ತೆರಿ ತೆರಿವರ ಚಿಮ್ಮಣ ಹಿಗ್ಗಲಿ'. ಎನ್ನುವಲ್ಲಿ ಕುಣಿತದ ಬೆರೆಯುವಿಕೆಯಿಂದ ಸಿಗುವ ಸಂತೃಪ್ತಿಯ ವಿವರವಿದೆ.

"ಕಾಮ ಕಾವಿಗೆ ಮುಗಿದು ಹೋಗಬಾರದು. ಅದರೊಳಗಿನ ಪ್ರೇಮ ಜಾಗೃತವಾಗಬೇಕು. ಸಂಬಂಧಗಳನ್ನು, ಲೋಕಗಳನ್ನು ಬೆಳಗ ಬೇಕು. ಇಂದ್ರೀಯಗಳ ಸಂಪೂರ್ಣ ಸುಖ ಹೀರಿಯೂ ಅಂಟಿಕೊಳ್ಳಬಾರದು. ಕಾಮ ಎಂಬುದು ಮೂಲತಃ ಸೃಜನಶೀಲವಾಗಬೇಕು ಎಂಬನಿಲುವು ಬೇಂದ್ರೆ ಅವರದ್ದು."

ಶುದ್ಧ ಭಾರತೀಯ ಹಿನ್ನಲೆಯಲ್ಲಿ ಬೇಂದ್ರೆ ಕಾವ್ಯಗಳ ಪ್ರೇಮ ಮಿಮಾಂಸೆ ರಚಿತವಾಗಿದೆ. ದೈಹಿಕ ಕಾಮ-ದೇವಕಾಮವಾಗುವ ದಿವ್ಯತ್ವ ಇಲ್ಲಿ ಕಂಡು ಬರುತ್ತದೆ. ಪಾಂಪತ್ಯ ಪ್ರೇಮದ ಸ್ಥಾಯಿಭಾವದಿಂದ ಇವರ ಪ್ರಣಯ, ಕಾವ್ಯಗಳು ರಚಿತವಾಗಿವೆ. 'ಕಲ್ಪವೃಕ್ಷ-ವೃಂದಾವನಂಗಳಲಿ' ಕಾವ್ಯದ ನಾಯಕ ತನ್ನ ಸಖಿಯೊಡನೆ ಸುತ್ತಾಡಿ ಇಬ್ಬರೂ ದೈಹಿಕವಾಗಿ ಒಂದಾಗುವ ಪ್ರತಿಮೆ ಇದೆ.

ಕೇಳು ಕಮಲ ಮುಖಿ ಏಳು ಜೀವ ಸಖಿ

ಕಂಡ ಸುಖದ ಕೀಲ !

ಬಾಲ ಸುತ್ತಿ ಹೆಡೆಯೆತ್ತಿ ತೂಗುತಿರೆ

ಭೋಗ ಸುಪ್ತಕಾಲ

ಈs ತೋಳಿನಲಿ ಹೋಳು ವೈಯಿರಲು ಬೀಸಿತಿಂದ್ರಜಾಲ"-

ಬಾಲಸುತ್ತಿ ಹೆಡೆಯೆತ್ತಿ ತೂಗುವ ಸುಪ್ತಕಾಮದ ಶಕ್ತಿಶಾಲೀ ಚಿತ್ರಣ ಇಲ್ಲಿದೆ. ಮನದ ಚಿತ್ರವೇ ಮೈಯ ತಾಳಿದಂತೆ-ಪ್ರಣವನಾದ ಪ್ರಣಯ-ನಾದದಂತೆ.

ಎರಡು ಒಪ್ಪಿಸಿವೆ ಕುಶಲ ಕಲೆಗಳಲ್ಲಿ

ಎರಡು ಅಪ್ಪಿ ಇಹವು

ಎಲ್ಲರಲಿ ತಲ್ಲೀನರಾಗಲೋ

ಜೀವ ಜಪ್ಪಿಸಿಹವು.

ಪ್ರಣಯ ಲೀಲೆಯಲ್ಲಿ ಒಂದಾದ ಜೋಡಿ ಜೀವಗಳ ಜಪ್ಪಿಸುವಿಕೆ 'ತೋಳು ತೋಳಿನಲಿ ಕಸೆಯ ಮಾಡಿದೊದು ಎದೆಯ ಬೆಸೆಯುತಿಹವು' ಎಂಬಲ್ಲಿಗೆ ಪೂರ್ಣವಾಗಿದೆ. ಈ ದೇಹ ಕಾಮ - ದೇವ ಕಾಮವಾಗುವ ಸ್ಥಿತಿಯ ದಿವ್ಯತ್ವವನ್ನು ಕವಿ ಮುಂದೆ ಚಿತ್ರಿಸುತ್ತಾರೆ.

'ತನ್ನ ಉಸಿರೇ ನನ್ನದಾಗಿಸುತ

ಮೆಲ್ಲನುಲಿಸಿಕೊಳಲು

ಎದೆಯಲಾವುದೋ ದನಿಯು ಮೂಡುತಿದೆ

ಊದಿದಂತೆ ಕೊಳಲು ಹೇಗೋ ರಾಧೆಯಾದೆ '೭'

ನಾನೋ - ನೀನೋ ಎಂಬ ಅನನ್ಯತೆಯಿಂದ ಲೈಂಗಿಕಾನುಭವವೇ-ದೈವಿಕಾನುಭವವಾಗುವ ದಿವ್ಯತ್ವ ಸ್ಥಿತಿ ಪ್ರಾಪ್ತವಾಗುತ್ತದೆ.

ಮರುಳ ಸಿದ್ಧನ ಮರುಳು ಮಾಡಲು ಹೋದ ಕಿನ್ನರಿ ತಾನೇ ಅವನಿಗೆ ಮರುಳಾಗುವ ಸಂದರ್ಭ 'ಮಾಯಾ ಕಿನ್ನರಿ' ಯಲ್ಲಿದೆ. ಮಾಯೆ ಉನ್ಮತ್ತಳಾಗಿ ಸಿದ್ದರ ಜೊತೆಗೆ ಸರಸವಾಡುವ ಚಿತ್ರಣ ಈ ಕವಿತೆಯಲ್ಲಿದೆ.

ಅಗಲಿದ ಇನಿಯನ ಫಕ್ಕನೆ ನೋಡುತ
ಬಸಿರ ಹೂ ಕುಲುಕುಲು ನಕ್ಹಾಂಗ
ನಲ್ಲ ಮುಟ್ಟಿದ ಗಲ್ಲ, ನಲ್ಲೆಯ ಮೈಯೆಲ್ಲಾ ಹಿಗ್ಗಿನ ಮುಳ್ಳಿಗೆ ಸಿಕ್ಹಾಂಗ
ಜುಮ್ ಜುಮು ರುಮು ಜುಮು ಗುಂಗುಣು ದುಮು ದುಮು
ನಾದದ ನದಿಯೊಂದು ನಡೆದಾಂಗ
ಗಲ್ಲ ಗಲ್ಲಕೆ ಹಚ್ಚಿನಲ್ಲ ನಲ್ಲೆಯರಿರುಳು
ಗುಜುಗುಜು ಗುಲುಗುಲು ನುಡಿಧಾಂಗ

ಕವಿ ಬೇಂದ್ರೆಯವರಿಗ ದೇಹವೊಂದು ದೇವ ವೀಣೆಯಾಗಿದೆ. ದೇಹ ಸುಖ ಉನ್ಮತ್ತೆಯತ್ತ ಏರಿ - ತನ್ಮಯತೆಯ ಸಮಸ್ಥಿತಿಯಲ್ಲಿ ವಿಶ್ರಮಿಸುವ ದೇಹ ಸ್ಥಿತಿಯನ್ನು ಹೀಗೆ ಚಿತ್ರಿಸಿದ್ದಾರೆ.

ಆತ ನೀತನವಂತ ಯಾತನೆದ ಯಾತನಯ
ಯಾತ ಕಿರುಗುಟ್ಟೊಂದು ನಿಂಧಾಂಗ
ನಾನೀಗ ನುಡಿ ನುಂಗಿ ತಾನೀನ ತಾನೆ ತಾ
ತಾನಾಗಿ ತನನನನ ಬಂಧಾಂಗ
ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು
ಹತ್ತಾಗಿ ಜತ್ತಾಗಿ ಸುಳಿಧಾಂಗ
ದಣಿದ ಜೀವದ ಮ್ಯಾಲೆ ಜೇನಿನ ಸುರಿಮಳೆ
ಜೇಂಗುಟ್ಟಿ ಹನಿ ಹನಿ ಇಳಿಧಾಂಗ ಕಾಮ 'ಲ'

ಕಾಮದ ಮೂಲ ಅನುಭವದ ವಾಸ್ತವತೆಯನ್ನು ಕವಿ ಇಲ್ಲಿ ಕಂಡಿರಿಸಿದ್ದಾರೆ. 'ಮಾಯೆಯ ಮೈಗೆ ಮೈ ನುಡಿಧಾಂಗ' ಎನ್ನುವಲ್ಲಿ ಕಿನ್ನರಿಯ ಮೈ-ಮನಗಳ ಸೋಲಿನ ವಿವರ ಇದೆ. ಸುಖದ ಸಂತೃಪ್ತಿ ಸ್ಥಿತಿಯಲ್ಲಿ ಯಾತನೆಗೊಂಡ ಮೈಯ ವಿವರದ ಚಿತ್ರಣ ಇಲ್ಲಿದೆ.

ಪ್ರೀತಿಯ ಚುಂಬಕದ ಕೂಡುವಿಕೆಗೆ ಕವಿ
'ಆ ಮುಖಾ-ಈ ಮುಖಾ
ಯಾವ ಗಂಡೋ
ಯಾವ ಹೆಣ್ಣೋ
ಪ್ರೀತಿಯೆಂಬ ಚುಂಬಕಾ
ಕೂಡಿಸಿತ್ತು
ಆಡಿಸಿತ್ತು
ಕೂಡಲ ದೊಲು ನೋಟವಾ
ಮೂರು ದಿನದ ಆಟವಾ

ಎನ್ನುತ್ತಾರೆ. ಶರೀರ ಕಾಮ ಪ್ರಾರಂಭದ ಕೆಲ ದಿನಗಳಲ್ಲಿ ತೀವ್ರವಾಗಿರುತ್ತವೆ. ಕ್ರಮೇಣ ಆಟಕೂಟಗಳು ಪ್ರಖರತೆ ಪ್ರೇಮದ ವಾರಸುದಾರನನ್ನು ಸೌಮ್ಯತೆಗೆ ತಳ್ಳುತ್ತದೆ. ಅಪರಿಚಿತ ಗಂಡು - ಹೆಣ್ಣಿನ ಕೂಟ ಎಳೆತದ ಸೆಳೆತಗಳಿಂದ ಸೃಷ್ಟಿಯಾದ ಸಂತಾನದ ವಿವರಕ್ಕೆ ಕವಿ 'ಚಿರಂತನ' ಕಾವ್ಯದಲ್ಲಿ ಹೀಗೆ ನೀಡುತ್ತಾರೆ.

ಹೆತ್ತುದೊಂದು
ಹೊತ್ತುದೊಂದು
ಬೆರಕೆಯಿಂದೊ
ಎರಕದಿಂದೊ
ಬಂತು ಬೇರೆ ಜೀವನಾ '೯'

ಕೃಪೆಯೋ ಕಾಮದೇವನಾ ಕಾಮದ ಕೃಪೆಯಿಂದಲೇ 'ಸಂತತಿಯೇ ಚಿರಂತನ' ಎಂದಿದ್ದಾರೆ. ದಾಂಪತ್ಯದ ಸೆಳೆತ ಕೇವಲ ದೈಹಿಕ ಅಭೀಪ್ಸೆಗಾಗಿ ಮಾತ್ರವಲ್ಲ ಸೃಷ್ಟಿ ಸಂಕೇತವೂ ಹೌದು.

ಪ್ರೇಮದ ಬೀಜ ಮೂಲ
ಪ್ರೇಮ ಫಲದ ಕೊನೆಗೆ

ಆದ್ದರಿಂದ ಪ್ರೇಮದಿಂದಲೇ ಜೀವನ ಸಾಫಲ್ಯ ಕಾಣುವುದು ಪ್ರೇಮ ಬೀಜ ಕವನದಲ್ಲಿ ಕಾಣಬಹುದು.

ಏಳು ಕನ್ನಿಕೆಯರು 'ಕಾವ್ಯದಲ್ಲಿನ ಲೈಂಗಿಕ ವಿವರಗಳು ಪರೀಕ್ಷಾರ್ಥವಾಗಿ ಮೂಡಿಬಂದಿದೆ" ನಿದ್ದೆ-ನಿದ್ದೆಗೆಡಲಿನಲಿ ಎದ್ದೇಳುತ್ತಿದ್ದಾಗ 'ಏಳುಕನ್ನಿಕೆಯರು' ಬಂದು ನಾಯಕನನ್ನು ಸುತ್ತುವರಿಯುತ್ತಾರೆ.

ನಿಂತೆ ನಡುವೆ ಗೊಮ್ಮಟನೊಲು
ನಿಂತಿರುವರು ಒರಗಿಸುತ್ತು
ದೀಪಮಾಲೆ ಕಂಬದಲ್ಲಿ
ದೀಪದ ಕುಡಿ ಕುಡಿಯೆಲೋ-ದೀಪದ ಕುಡಿ ಕುಡಿಯೆಲೋ?

ಗೊಮ್ಮಟನ ಹಾಗೆ ದಿಗಂಬರನಾಗಿ ನಿಂತ ನಾಯಕನ ಸುತ್ತ ದೀಪದೆ ಕುಡಿಯಂತೆ ನಿಂತಿದ್ದಾರೆ. ಗುಡಿ ದೀಪದ ಬೆಳಕಿನಲ್ಲಿ ನಾಯಕನ ಆತ್ಮ ಪರೀಕ್ಷೆ ನಡೆಯುತ್ತದೆ.

ಅಡಿ ಮುಡಿಗಳ ತುಟಿ ಕಟಿಗಳ
ಮಿಡಿದು ಹಿಡಿತು ನೋಡುತಿರಲು
ಮರ್ಮಕೆಣಕಿ ನೋಡಿದಂತೆ
ಕರ್ಮಕುದಿಗೆ ಬಂದಿತೋ ಕರ್ಮ ಕುದಿಗೆ ಬಂದಿತು.

ದಿಗಂಬರನಾಗಿ ನಿಂತ ಗಂಡಿನ ಶರೀರದ, ಅಡಿಮುಡಿಗಳ, ತುಟಿಕಟಿಗಳ ಮಿಡಿದು-ಹಿಡಿದು ನೋಡುವ ಕ್ರಿಯೆ ಅವನಲ್ಲಿ ಕಾಮನೆಯನ್ನು ಕೆರಳಿಸುವುದಾಗಿದೆ. ಭೌತಿಕವಾಗಿ ಗೊಮ್ಮಟನಾದರೂ ಮಾನಸಿಕವಾಗಿ ಆ 'ಎತ್ತರಕ್ಕೆ'ಏರದ ನಾಯಕ ತನ್ನ ಸ್ಥಿತಿಯ ಬಗ್ಗೆ ಮರುಕಗೊಂಡು ಕಲ್ಲು, ಗೊಂಬೆ, ಕೂಸುಗಳಿಗೆ ತನ್ನನ್ನು ಸಮೀಕರಿಸಿಕೊಳ್ಳುತ್ತಾ, ಬೆಣ್ಣೆಯಂತೆ ಒಳಗೆ ಕರಗುತ್ತಿದ್ದಾನೆ. ಅವರ ಕೆರಳಿಸುವಿಕೆಗೆ ಸೋಲದೆ,

ನಡುಕ-ಮಿಡುಕು ತೊರಗೊಡದ
ಅಡಕದಿಂದ ನಿಂತ ತಪಕೆ
ನಿಲ್ಲುತ್ತಾನೆ ಗೆದ್ದನೇನೊ ಎನ್ನುವಂತೆ
ಇದ್ದೆನೊಮ್ಮೆ ಮನದೊಳೊ

ಅವರ ಕ್ರಿಯೆಗಳಿಗೆ ಪೂರಕ ಪ್ರತಿಕ್ರಿಯೆಯನ್ನು ತೋರಿಸದಂತೆ ಗೆಲ್ಲುವ ಹಮ್ಮಿನಿಂದ ನಿಂತಿದ್ದಾನೆ. ಆದರೆ ಅವರಷ್ಟು ಜನ

ಬೊಟ್ಟು ನೀರು ಬಿಡದ ಹಾಗೆ
ಬಟ್ಟೆಯಂತೆ ಹಿಂಡುತಿರಲು
ತೊಡೆಯ ಮೀಂಟಿ ಬಿಟ್ಟಳಾಗ
ಕಡೆಗೆ ಅವರಳೊಬ್ಬಳೋ-ಕಡೆಗೆ ಅವರಳೊಬ್ಬಳು.

ತಪಸ್ಸಿನ ಹಾಗೆ ಅಡಕವಾಗಿ ಸೋಲದೆ ನಿಂತಿದ್ದೆ ನಾಯಕನ ಮನಸ್ಥೈರ್ಯವನ್ನು ಅಲ್ಲಾಡಿಸುವಂತೆ. ತೊಡೆಯ ಮೀಂಟಿ ಬಿದ್ದಳಾಗ'- ಬಟ್ಟೆಯ ಹಿಂಡಿ ಹಾಕಿದ ಹಾಗೆ ಅವನ ವಿಶ್ವಾಸ ಸೋರಿ ಹೋಗಿದೆ. ಅಸಹಾಯಕನಾಗಿ ನಿಂತ ಅವನ ಸ್ಥಿತಿ ನಾಚಿಗೆಗೇಡಿನ ನಂತಾಗಿದೆ.

ಅಯ್ಯೋ ಎಂದು ತಿಳಿಯದಾಗಿ
ಮೈಯ ಬಾಯಿ ಬಿಟ್ಟ ಹಾಗೆ
ಬೆವರು ಬಂದ ಮೈಯ ತುಂಬ
ನವಿರು ಮುಳ್ಳು ನಿಂತಿತೋ- ನವಿರು ಮುಳ್ಳು ನಿಂತಿತೋ-'ಗೊಮ್ಮಟನೊಲು'

ಎಂದು ತನ್ನನ್ನು ತಾನು ಗೊಮ್ಮಟನಿಗೆ ಹೋಲಿಸಿಕೊಂಡರೂ, ಅವನ ದೃಢತೆ ಇಲ್ಲದ ನಾಯಕ ಐಂದ್ರಿಕ ವಿಷಯಗಳಲ್ಲಿ ಸೋಲುತ್ತಾನೆ. 'ಮೈ ಬಾಯಿಬಿಟ್ಟ ಹಾಗೆ' ನವಿರು ಮುಳ್ಳುನಿಂತಿದೆ' ಎನ್ನುವಲ್ಲಿ ಹೆಣ್ಣಿನ ಸ್ಪರ್ಶ ಗಂಡಿನ ಆತ್ಮಸ್ಥೈರ್ಯಕ್ಕೆ ಸವಾಲಾಗಿದೆ.

'ಬೆಳಕಿನ ಕುಡಿ ಆರುವಂತೆ
ಚಪಲ ಕನ್ನಿಕೆಯರು ಪರೀಕ್ಷಿಸಿದಾಗ ನಾಯಕ
ಆಧಾರ ತಪ್ಪಿದ 'ಜೇಡಿ ಮಣ್ಣಿನ ಕಂಬದಂತೆ
ಗಾಡಿಯಳಿದು ಬೀಳುತ್ತಾನೆ.

ಆದರೆ ನಾಯಕ ತನ್ನ ಸೋಲೂಪ್ಪಿಕೊಳ್ಳಲು ಸಿದ್ಧವಿಲ್ಲ.

ಏಳು ಕನ್ನಿಕೆಯರು ಬಂದು
ಬೀಳು ಎಂದು ಎನ್ನಲಿಲ್ಲ
ಸ್ಪರ್ಶ ಸ್ಪರ್ಶದಿಂದ ಮಾತ್ರ
ಹರ್ಷ ಹೆಪ್ಪು ಹೊಂದಿತೂ
ಹರ್ಷ ಹೆಪ್ಪು ಹೊಂದಿತೂ
ಸೋತ ನಾಯಕ ಮತ್ತೆ ಸಲ್ಲಾಪಕ್ಕೆ ಕನ್ನಿಕೆಯರನ್ನು ಕರೆಯುತ್ತಾನೆ.
ಏಳು ಕನ್ನಿಕೆಯರೆ ಬಂದು
ಆಳ ಮುಳುಗಿ ನೋಡಿರೆ ಆಳ ಮುಳುಗಿ ನೋಡಿರೆ '೧೧'

ಎಂದು ನಾಯಕ ಅವರಿಗೆ ಪಂಥಾಹ್ವಾನವನ್ನು ನೀಡುತ್ತಿದ್ದಾನೆ. ನಾಯಕ ಮೊದಲ ಪರೀಕ್ಷೆಯಲ್ಲಿ ಸೋತರೂ ಮತ್ತೆ ಇನ್ನೊಂದು ಪರೀಕ್ಷೆಗೆ ಸನ್ನದ್ಧನಾಗಿದ್ದಾನೆ. ಐಂದ್ರಿಯಕಗಳ ಮೋಹ ದೃಢಮನಸ್ಸನ್ನು ಕೆಂಗೆಡಿಸುತ್ತದೆ. ವಿಫಲ ಸಾದನೆಯಿಂದ ಮೇಲೆದ್ದು ವಿಜೃಂಬಿಸುವ ಅವನ ಲೈಂಗಿಕಾಸಕ್ತಿ ತಾನೇ 'ಆಳ ಮುಳುಗಿ

ನೋಡಿರೆ' ಎಂದು ಆಹ್ವಾನವನ್ನು ನೀಡುವಂತೆ ಪ್ರೇರೇಪಿಸಿದೆ. 'ಗೊಮ್ಮಟನ' ಅಧ್ಯಾತ್ಮಿಕ ಪರಿಭಾಷೆಯೊಂದಿಗೆ ಪ್ರಾರಂಭವಾದರೂ ಲೋಕಿಕ ಲೈಂಗಿಕಾಸಕ್ತಿಯಿಂದ ಬಿಡುಗಡೆ ಸುಲಭ ಸಾಧ್ಯವಲ್ಲ ಎಂಬ ಸಂಕೇತ ಕಾವ್ಯದಲ್ಲವೆ.

ಬೇಂದ್ರೆ ಅವರ ದಾಂಪತ್ಯದ ಚೌಕಟ್ಟಿನೊಳಗೆ ಬರುವ ಕವನಗಳಲ್ಲಿ ಪ್ರಣಯದ ಆವೇಶ ಉನ್ಮಾದಗಳಿಗೆ ಎಡೆಯಿಲ್ಲ. ತನ್ನ ಕೈಹಿಡಿದಾಕೆಯ ಜೊತೆಗಿನ ಸುಖ -ದುಃಖ ಸಾಮರಸ್ಯಗಳ ಅನುಭವದ ಬಾಳನ್ನು ಕಾವ್ಯವನ್ನಾಗಿಸಿದ್ದಾರೆ. ಬದುಕಿನ ಸಂಕಷ್ಟಗಳ ಸಂದರ್ಭದಲ್ಲಿ 'ಒಲವು' ಮೌಲ್ಯವಾಗಿ ನಮ್ಮನ್ನು ಕಾಪಾಡಲಿ ಎಂಬ ಹಾರೈಕೆ ಇದೆ. ಕವಿಯ ವೈಯಕ್ತಿಕ ಬದುಕು ಬಡತನ-ಸಾವು-ಸಂಕಷ್ಟಗಳಿಂದ ಕೂಡಿತ್ತು. ಕವಿ ಸಮಾಜದ ನಾನಾ ನೆಲೆಗಳಲ್ಲಿ ತನ್ನ ವ್ಯಕ್ತಿತ್ವದ ಗ್ರಹಿಕೆ ಕಂಡವರು. ಆದರೆ ಕವಿಪತ್ನಿಗೆ ಕವಿ ಹಾಗೂ ಸಂಸಾರದ ಜಂಜಾಟದ ಹೊರತು ಬದುಕಿಲ್ಲಾ ಸಖ-ಸಖಿಯರ ಬದುಕಿನ ಗ್ರಹಿತ ಮೌಲ್ಯಗಳು ಭಿನ್ನವಾದಾಗ ಭಿನ್ನಾಭಿಪ್ರಾಯ ಸಹಜ. ಜೀವನದ ಸಾಮರಸ್ಯ ಹಾಳಾಗಬಾರದೆಂಬ ಮಿಡಿತದಿಂದ ಕವಿ ಸಖಿಯನ್ನು ಸಂತೈಸುವ ಪ್ರಯತ್ನವನ್ನು ಮಾಡುತ್ತಾನೆ. ದಾಂಪತ್ಯ ಕುರಿತ ಸಖಿಯ ಕಲ್ಪನೆಗೂ ಆದರ್ಶ ಸತ್ವಗಳ ಸ್ಥಿತಿಯಲ್ಲಿ ಬದುಕನ್ನು ಅರ್ಥೈಸುವ ಸಖನ ಗ್ರಹಿಕೆಗೂ ಅಪಾರ ಸಂಘರ್ಷಗಳುಂಟಾಗುತ್ತವೆ. ಆ ಸಂದರ್ಭದಲ್ಲಿ ದಾಂಪತ್ಯದ ಬದುಕಿಗೆ ಉತ್ಸಾಹ ತುಂಬುವ ಕೆಲಸವನ್ನು ಕವಿ-ಕಾವ್ಯ ಮುಖೇನ ಮಾಡುತ್ತಾನೆ. ವೈಯಕ್ತಿಕ ಹಾಗೂ ಸಾಮಾಜಿಕ ಬದುಕಿನ ನಡುವಿನ ವ್ಯತ್ಯಾಸಗಳನ್ನು ಸರಿಪಡಿಸಲು ನೊಂದ ಸಖಿಯಲ್ಲಿ ನಗು ಕಾಣಿಸಲು ಸರ್ವ ಪ್ರಯತ್ನ ಮಾಡುತ್ತಾನೆ. ಈ ಗೀತೆಗಳು ಮೈತುಂಬಿ ಹರಿಯುವ ನದಿಯ ಸ್ವರೂಪವುಳ್ಳವಾಗಿದೆ. ಪರಸ್ಪರರಲ್ಲಿ ಉಳಿದುಕೊಳ್ಳುವ ಬೆಳೆದುಕೊಳ್ಳುವ ಪ್ರೇಮದ ಆಶೆಯವನ್ನು ವ್ಯಕ್ತ ಪಡಿಸುತ್ತವೆ.

ತನ್ನ ನಲ್ಲೆಯ ನಗೆಯನ್ನು ಮತ್ತೆ ಕಾಣುವ ಆಸೆ. ಕನಸನ್ನೂ ಆತ ಇನ್ನೂ ಉಳಿಸಿಕೊಂಡಿದ್ದಾನೆ. ಬಾಳಿನ ಕಷ್ಟಗಳ ಸುಳಿಯಲ್ಲಿ ಸಿಕ್ಕಿ ಬಸವಳಿದಿರುವ ನಲ್ಲೆಯನ್ನು ನಿರಾಶೆಯ ಕೂಪದಿಂದ ಹೊರಕ್ಕೆ ಬರಲು ಮಾಡುವ ಪ್ರಮಾಣಿಕ ಪ್ರಯತ್ನ 'ನನ್ನ ಕೈಯ ಹಿಡಿದಾಕೆ' ಕವನದಲ್ಲಿದೆ.

'ನನ್ನ ಕೈಯ ಹಿಡಿದಾಕೆ ಅಳು ನುಂಗಿ ನಗು ಒಮ್ಮೆ
ನಾನೂನು ನಕ್ಕೇನಃ
ಇಲದಿರಕ ನಿನ ಅಳುವ ಹುಚ್ಚು ಹಳ್ಳದ ಕಳ್ಳ
ಹುದುಲಾಗ ಸಿಕ್ಕೇನಃ'

ಬದುಕು ಕಷ್ಟ-ಸುಖಗಳ ಸಮ್ಮಿಶ್ರಣ. ಕಷ್ಟದ ಬಾಳಿಗೆ ಅಳುತ್ತಾ ಕುಳಿತರೆ ನಿನ್ನ ಸುಖವನ್ನೆ ನೆಚ್ಚಿ ಬಾಳುವ ನಾನು ಹೇಗಿರಲಿ. ನಿನ್ನ ನಗು ನನ್ನಲ್ಲು ನಗು ತರಿಸುತ್ತದೆ. ನಿನ್ನ ಅಳು ಹಳ್ಳದ ಕೆಸರಿನಂತೆ ನನ್ನನ್ನು ತನ್ನೆಡೆಗೆ ಸೆಳೆಯುವುದೇ ನಿಜ! ಜಗತ್ತಿನಲ್ಲಿ ನೆರಳು-ಬೆಳಕು, ಹಗಲು-ಇರಳು, ಕತ್ತಲು, ಬಿಸಿಲು, ಸೋಲು-ಗೆಲುವು ಇದ್ದದ್ದೆ. ಆದರೆ ನೋವಿಗೆ ಶರಣಾಗಿ ಕುಳಿತರೆ ನಗು ಮಾಯವಾಗಿ ನರಳಬೇಕಾಗುತ್ತದೆ.

ಹುಸಿನಗುತ್ತಾ ಬಂದೇವ ನಸುನಗುತ ಬಾಳೋಣ
ತುಸು ನಗುತ ತೆರಳೋಣ
ಬಡನೂರು ವರುಷಾನ ಹರುಷಾದಿ ಕಳೆಯೋಣ
ಯಾಕಾರೆ ಕೆರಳೋಣ '೧೨'

ಇರುವುದೇ ಬಡ ನೂರು ವರುಷ! ಕವಿಯ ಪಾಲಿಗೆ ನೂರು ವರುಷ ಸಣ್ಣ ಅವಧಿಯಾಗಿದೆ. ಈ ಅವಧಿಯನ್ನು ಹರುಷದಲ್ಲಿ ಕಳೆಯೋಣ ಕೆರಳುವಿಕೆ ಬೇಡ, ಬಡತನವಾಗಲಿ, ಒಡೆತನವಾಗಲಿ ಕಡೆತನಕ

ಇರುವುದಿಲ್ಲ. 'ಎದೆ ಹಿಗ್ಗು ಮಾತ್ರ ಕಡೆ ಮಟ್ಟ' ಇರುತ್ತದೆ. ಆದ್ದರಿಂದ ಸಖಿ ನಮ್ಮ ಬಾಳ ದೋಣಿಯನ್ನು ನಡೆಸುತ್ತಿರುವಳು ನೀನು. ಕಡೆಗೋಲು ಹಿಡಿದು ದೋಣಿಯನ್ನು ದಡಕ್ಕೆ ಸೇರಿಸು. ಗಂಡು ಎಷ್ಟು ಬಲಾಢ್ಯನಾದರೂ ಹೆಣ್ಣು ಸಂಸಾರದ ಕಣ್ಣು, ಅವಳ ಸುಖದಲ್ಲಿ ಬದುಕಿನ ಸುಖವರಳಿದೆ. ಅವಳ ನಿರಾಸೆ ಬಾಳ ದೋಣಿಯನ್ನು ಮುಳುಗಿಸಬಹುದು ಆದ್ದರಿಂದ ನೀನು ನಕ್ಕು, ನನ್ನನ್ನು ನಗಿಸು. ನಿನ್ನ ನಗು ಸಂಕ್ರಾಮಿಕವಾಗಲಿ ಎಂದು ಬಯಸುತ್ತಾನೆ.

'ಸತಿಯ ಬದುಕು ಮುಗಿಲ ನೋಡುವ ಗೌರಿಶಂಕರದಂತೆ ಸತಿಯ ಭಾವ ನೆಲೆದೊಡಲಲ್ಲಿ ಹರಿವ ಗಂಗೆಯಂತಾದಾಗ ಏಳುಬೀಳು ಸಹಜ.' ಆದರೆ ಈ ಏಳು-ಬೀಳುಗಳನ್ನು ಸರಿದೂಗಿಸದೇ ಇದ್ದರೆ ಸಂಸಾರ ಸಮರಸ ಮರೆತ ಇಜ್ಜೋಡಾಗುತ್ತದೆ. ಹೀಗಾಗದಿರಲಿ ಎಂದು ವಿರಸದಲ್ಲಿನ ಸಖಿಯನ್ನು ಸರಸಕ್ಕೆಳೆಯುವ ಚಿತ್ರಣ 'ನಾನೊಂದು ನನೆದರೆ' ಕವನದಲ್ಲಿದೆ.

ನಾನೊಂದ ನೆನೆದರೆ ನೀನೊಂದ ನೆನೆಯುತಿ
ನನ್ನ ನಗಿಗ್ಯಾಕಿ ಮುನಿಯುತಿ
ಎಂದೆನಗ

ಬಿದ್ದೀತು ನೋಡ ಇತಿ ಮಿತಿ! ಸುಖವನ್ನು ಅರ್ಥೈಸಿಕೊಳ್ಳಲಾರದ ಸಖಿಯ ರೀತಿಯನ್ನು ಕವಿ ಆಕ್ಷೇಪಿಸುತ್ತಾರೆ. ನನ್ನ ಸರಸದ ನಗೆಗೆ ವಿರಸದ ಹೊಗೆ ಯಾಕೆ. ನನ್ನ ನಗು ನಿನಗೆ ಮುನಿಸು ತರುವುದು ಏಕೆ? ನನ್ನ ಸವಿ ಗನಸು ಹರಿದು ಹೋಗುವ ಹಾಗೆ ನಿನ್ನ ವರ್ತನೆ ಇದೆ

ಹಾಸೀಗಿ ಮಗ ಮಗ ಮಂಚಽಕೆ ಝುಗ ಝುಗ
ನನ್ನ ಎದಿ ಮಾತ್ರ ಧಗ ಧಗಽ
ಉರಿದೀತು

ಹೊತ್ತಿತ್ತ ಬೆಂಕಿ ಹೊರ ಜಗ ಎದೆಗೆ ಉರಿ ಹಚ್ಚಿದ ನೀನು ಅರಸ ತೂಕದ ಹೆಣ್ಣು" ನನ್ನ ಬದುಕು ಸವಿ ಸತ್ತ ತಾಂಬೂಲದಂತೆ ಕಹಿ ವಿಷವಾಗಿದೆ. ನುಂಗಲು ಎಡೆಯಿಲ್ಲ ಎಂದು ತಾನೇ ಧೈರ್ಯಗೆಡುತ್ತಾನೆ.

ಎಸ್ತ ಕನ್ನಡಿ ಹರಳು ಬೆಸ್ತು ಕೂಡೀತೇನ
ಹಸ್ತ ಕರುಳೀನ ಕುಡಿ ಚಿವುಟಿ
ಕಡೆಗೊಮ್ಮೆ
ಸೊಸ್ತಿ ಎಂದಽರೆ ಫಲವೇನ? '೧೩'

ವಿರಸ ಸೃಷ್ಟಿ, ಇದೀಗ ಸ್ವಸ್ತಿ -ಶುಭವಾಗಲಿ ಎಂದರೆ ಒಡೆದ ಬದುಕು ಹಸನಾದೀತೆ ಎಂದು ಸಖಿ ವಿರಸ ದಾಂಪತ್ಯವನ್ನು ತೋರಿದ್ದಾನೆ.

ಬಡತನದ ದಾಂಪತ್ಯದ ಬದುಕಿನಲ್ಲಿ ಬೇಂದ್ರೆ ಕಂಡ ಒಲುವಿನ ಸಿದ್ಧಾಂತ 'ನಾನು ಬಡವಿ' ಕಾವ್ಯದಲ್ಲಿದೆ.

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು

ಬಡತನ ಕವಿಯ ಬದುಕಿನುದಕ್ಕೂ ಜೊತೆಯಾಗಿ ಬಂದಿತ್ತು. ಪತ್ನಿ ತನ್ನವನ ಆರ್ಥಿಕ ಸ್ಥಿತಿಗೆ ಮರುಗುತ್ತಾ ನಾವು ಕಾಸಿನ ವಿಷಯದಲ್ಲಿ ಬಡವರೇ ಹೌದು ಆದರೆ ಒಲವಿಗೆ ಬಡತನವಿಲ್ಲ. ಆ ಬಲವನ್ನೇ ಆದಕು-ಇದಕು ಎದಕು ಬಳಸಿಕೊಂಡು ಬಡತನದ ಕೊರತೆಯನ್ನು ನೀಗಿಸಿಕೊಳ್ಳುತ್ತೇವೆ. ಕಣ್ಣು ತುಂಬಾ ಆವರಿಸಿರುವ ಆತನ ಮೂರ್ತಿ ಸದಾ ಜೊತೆಗಿದೆ. ಅವನ ಒಲವಿನ ಸ್ಪರ್ಶ, ಚಳಿಗೆ ಬಿಸಿಲಿಗೊಂದೆ ಹದನ. ಮೈ ತುಂಬಾ ನವರು ಬಟ್ಟೆಯನ್ನು ಹೊದಿಸುವ ಅವನ ನೀವರಿಕೆಯೇ ಬಯಕೆಗಳ ನೀಗಿಸುತ್ತದೆಯಂತೆ.

"ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳಗಳಿಗೆ ತೋಳ ಬಂದಿ
ಕೆನ್ನೆ ತುಂಬ ಮುತ್ತು" 'ಗಿಳಿ'

ಸತಿ ಪತಿಯರ ಏಕಾಂತದಲ್ಲಿನ ಗುಟ್ಟಿನ ವಿಷಯವನ್ನು ಪಿಸುಗುಡುವ ನಾಯಕಿ ಒಲವಿನ ಒಡವೆಗಳ ಕುರಿತು ಹೇಳುತ್ತಿದ್ದಾಳೆ. ಆತನ ಒಲವಿನಿಂದಾಗಿ ಬದುಕಿನ ತುಂಬಾ ಕುಂದು ಕೊರತೆ ತೋರಲಿಲ್ಲ ಬೇಕು ಹೆಚ್ಚಿಗೇನು?

ಕೊರತೆಗಳ ಕೊರಗು ಬದುಕನ್ನು ದುಃಖದಲ್ಲಿ ಮುಳುಗಿಸುತ್ತದೆ. ಪ್ರೇಮದ ಹದದಲ್ಲಿ ಮುಳುಗಿ ಹೋದ ಅವನು 'ಹೊಟ್ಟೆಗೆ ಜೀವಫಲವನ್ನು ತುಟಿಗೆ ಹಾಲು ಜೇನನ್ನು ನೀಡಿದ್ದಾನೆ. ಸರಸ ದಾಂಪತ್ಯದ ಕುರುಹಾಗಿ ಬರಲಿರುವ ಕೂಸು ಅವಳ ಬಡತನ, ನೋವನ್ನು ಮರೆಸಿದೆ. ಪ್ರೇಮದೂಡಗೂಡಿದ ಕಾಮ ಸೃಜನಶೀಲವಾದದ್ದು ಎಂಬ ನಂಬುಗೆಯುಳ್ಳ ಕವಿ ಬೇಂದ್ರೆ ಅದರ ಪ್ರತಿಫಲನವನ್ನು 'ನಾನು ಬಡವಿ'ಗೀತೆಯಲ್ಲಿ ಕಂಡಿರಿಸಿದ್ದಾರೆ.

"ಆಡದಿರು ಮನದನ್ನೆ
ಎನಗೆ ಇದಿರಾಡದಿರು"

ಎಂದೇ ಆರಂಭವಾಗುವ 'ಮನದನ್ನೆ' ಗೀತೆಯಲ್ಲಿ ಗಂಡ-ಹೆಂಡಿರ ನಡುವಲ್ಲಿ ನೆಡೆಯುವ ವಾದ-ವಿವಾದ, ವಿರಸ ದಾಂಪತ್ಯದ ವಿವರವಿದೆ. 'ದಾಂಪತ್ಯ' ದಲ್ಲಿ ವಿರಸ ಸಹಜ. ಆದರೆ ವಿರಸವನ್ನು ಸಂವಾದದಿಂದ ಬಗೆಹರಿಸಿಕೊಳ್ಳಬೇಕು. ಅಪಾರ್ಥ ವೈಮನಸ್ಸುಗಳನ್ನು ಬೆಳೆಸುತ್ತಾ ಹೋದರೆ ದಾಂಪತ್ಯದ ಹದ ಕೆಡುತ್ತದೆ. ಸಂಸಾರ ಸಾಗಿಸಲು ಹೊರಗೆ ದುಡಿಯಲು ಹೋದಾಗ ಹಲವು ಭಿನ್ನ ಮನೋಧರ್ಮದವರೊಂದಿಗೆ ಬೆಲೆಯಬೇಕಾಗುತ್ತದೆ. ಅಲ್ಲಿ ನಡೆಯುವ ವಾದ-ವಿವಾದಗಳಿಂದ ಬೇಸತ್ತು, ಶಾಂತಿ ನೆಮ್ಮದಿ ನೀಡುವ ಮನೆಗೆ ಬಂದಾಗ ಮತ್ತೆ ಪ್ರತಿವಾದಗಳ ಸಂದರ್ಭ ಸೃಷ್ಟಿಯಾದರೆ ಪತಿಯ ಮಾನಸಿಕ ಸ್ಥಿತಿ ಹೇಗಿರಬೇಡ. ಹೊರಗಿಲ್ಲದ ನೆಮ್ಮದಿಯನ್ನು ಒಳಗೆ ಅರಸುತ್ತ ಬಂದ ಪತಿಯನ್ನು 'ಮನದನ್ನೆ' ವ್ಯತಿರಿಕ್ತವಾಗಿ ಸ್ವಗತಿಸುತ್ತಾಳೆ. ಅವಳ ರೀತಿಗೆ ನೊಂದ ಪತಿಯ ಮಾತು ಹೀಗಿದೆ.

'ವಾದಕ್ಕೆ ಬೇಸತ್ತು
ಮರ್ಮಘಾತಕ್ಕೆ ಸತ್ತು
ಉಳಿದು ಬಂದೆ'
'ಇದಿರಾಡದಿರು ಗೆಳತಿ ನೀನು ಕೂಡ
ಹೃದಯವನು ರಣರಂಗ ಮಾಡಬೇಡ'

ಎನ್ನುತ್ತಾನೆ. ಉಳಿದವರು ಹೊರಗಿನವರು ಆದರೆ ನೀನು ಮನದನ್ನೆ. ಅವರಂತೆ ನೀನೂ ಕೂಡ ಇದಿರಾಡಿದರೆ ನಾನೆಲ್ಲಿ ಹೋಗಲಿ ಎಂಬ ಆರ್ತಭಾವ ಇದೆ.

ಎಲ್ಲಿಹುದು ತಿಳಿವಳಿಕೆ
ಜೀವನದ ಸಲುವಳಿಕೆ

ಎಂದು ತಳಮಳಿಸಿ ನೀರಡಿಸಿ ಬಂದೆ' ನಿನ್ನಿಂದ ಸಂತೈಸುವಿಕೆ ಆಗುತ್ತದೆ ಎಂದು ಬಂದರೆ ನೀನು

ಹೀಗೆನೆಲು ಹಾಗೆಂದು
ಬೆಂದ ಹೆಣವನು ಕೊಂದು
ಭೂತ ರೀತಿಯಲೀಗ ತೊಡಗಿರುವೆ

ಹೀಗೆ ಮಾಡಬೇಡ ಎಂಬ ಸಖನ ಬೇಡಿಕೆ ಅವನ ಸೋತ ದಾಂಪತ್ಯದ ಕುರುಹಾಗಿದೆ.

ವಾದಕ್ಕೆ ಪ್ರತಿವಾದ
ಸಾಕು ವಾದ ವಿವಾದ
ಜೀವ ಸಂವಾದಕೆ ಹಸಿದು ಬಂದ

ನೀಡು ಸಿಪ್ಪೆಯ ಸುಲಿದು ತಿಳಲನೊಂದೆ ಶಾಂತಿ ಪ್ರೀತಿ ಅರಸಿ ಬಂದ ಪತಿಗೆ 'ಜೀವ ಸಂವಾದ' ಸಾಂತ್ವನ ಹೇಳದೆ ವಾದ-ವಿವಾದದಲ್ಲಿ ತೊಡಗಿದ ಮನದನ್ನೆಗೆ ಸಿಪ್ಪೆಸುಲಿದು ತಿಳಿಲನ್ನು ನೀಡು ಎಂದು ಆರ್ತ ಧ್ವನಿಯಲ್ಲಿ ಕೇಳುತ್ತಿದ್ದಾನೆ.

ಅಣಕ ಮೂದಲಿಕೆಯಲಿ ಕಟಕಬೇಡ
ಕೆನ್ನೀರ ಕೆಸರನ್ನು ಕಲಕಬೇಡ

ದಾಂಪತ್ಯದಲ್ಲಿ ಸಮರಸ ಭಾವವನ್ನು ಕಾಯ್ದುಕೊಳ್ಳಬೇಕಾದ ಜೀವವೇ ಕೆನ್ನೀರ ಕೆಸರನು ಕಲಕುವ ಕೆಲಸ ಮಾಡಿದರೆ ಅವನಿಗೆ ನೆಲೆ ಎಲ್ಲಿಯದು?

ನನ್ನದಿದು ನಿನ್ನದಿದು
ಎಂದು ಎರೆಡನು ಬಗೆದು
ಪಾಲುಗಾರಿಕೆಗೆ ಹೆಣಗಬೇಡ
ನಿನಗೆ ನೀರಿಲ್ಲೆಂದು ಒಣಗಬೇಡ

ಎರಡು ಜೀವ ಬೆಸೆದು ಒಂದಾಗುವ ದಾಂಪತ್ಯದ ರೀತಿ ಪ್ರತ್ಯೇಕತೆಯ ಪಾಲುಗಾರಿಕೆ ಬೇಡ, ಅಸಮವಾದ ಬದುಕು ಸಮವಾಗಲಿ. ಸಾತತ್ಯ-ಸಾಂಗತ್ಯ ಬೆಳಯಲಿ. ಒಂದಕ್ಕೆ ಸಲ್ಲುವುದು ಇನ್ನೊಂದಕ್ಕೆ ಸಲ್ಲಬೇಕು. ಪತ್ಯೇಕತೆಯ ಭಾವ ಬೆಸುಗೆಯಾಗಲಾಗದು. ಭಿನ್ನವಾದ ಭಾವದಿಂದ ನೀನು ಸೊರಗಬೇಡ ಎಂದು ಮನದನ್ನೆಗೆ ಹಿತನುಡಿ ನೀಡಿದ್ದಾನೆ.

ನಾನು ನೀನೆಂಬ ಬೇಧ ಸರಿಯಲ್ಲ
ಒಂದುಸಿರೆ ತಾನಾಡಿದಂತೆ ಇಹುದು
ಹೀಗಿರಲು ಬಾಳುದ್ದ ಬದುಕಬಹುದು

ಎನ್ನುತ್ತಾ ವಿರಸವನ್ನು ಸರಸವಾಗಿಸುವ ಪ್ರಯತ್ನದಲ್ಲಿ ತೊಡಗಿದ್ದಾನೆ. ತನ್ನ ವಿಷಮ ದಾಂಪತ್ಯ

ಸಾಮರಸ್ಯದತ್ತ ಸಾಗಲಿ ಎಂಬ ಆಶಾಭಾವನೆ ತೋರುತ್ತಾನೆ. ಪತಿ ತನ್ನ ಅಹಂ, ಬಿರಸು, ಬಿಂಕಗಳನ್ನು ತೊಡೆದು ಅವಳ ಪ್ರೀತಿಯಲ್ಲಿ ಮಗುವಾಗ ಬಯಸುವ ಆಸೆಯನ್ನು ಹೀಗೆ ತೋಡಿಕೊಳ್ಳುತ್ತಾನೆ.

ಗಂಡ ದರ್ಪವ ಹರಿದು
ಬಿರುಸು ಬಿಂಕವ ತೊರೆದು
ತೋಳ ತೊಟ್ಟಿಲ ಮಗುವು ಆಗಿ ಬಂದೆ
ಗೊಂಬೆಯಾಡಿಸಿದಂತ ಆಡಿಸೆಂದೆ

P ಮನದನ್ನೆಗೆ ತನ್ನ ಶರಣಾಗತಿಯ ಭಾವವನ್ನು ವ್ಯಕ್ತಿಪಡಿಸಿದ್ದಾನೆ. ಗಂಡಿನ ಸಹಜ ದರ್ಪ ಅಹಂಗಳನ್ನು ಕೈಬಿಟ್ಟು ನಿನ್ನ ಮಡಿಲಿಗೆ ಬೀಳುತ್ತೇನೆ. 'ತಾಯ್ತನದ ಸೈರಣೆಯ ವಿವರಣೆ' ಯಿಂದ ತಾಳ್ಮೆಯ ಕರುಣೆಯಿಂದ ತೋಳ ತೊಟ್ಟಿಲಲ್ಲಿ ಗೊಂಬೆಯಾಡಿಸಿದಂತೆ ಮಗುವಾಗಿ ಬರುವ ನನ್ನನ್ನು ಸಂತೈಸು ಎಂಬ ಭಾವ ವ್ಯಕ್ತವಾಗಿದೆ. ಪ್ರೇಯಸಿ, ಪತ್ನಿಯಾಗಿ, ಸಖಿಯಾಗಿ, ತಾಯಿಯಾಗುವ ಪ್ರೇಮದ ಕಲ್ಪನೆಯಲ್ಲಿ ಕವಿಯ ಅಂತರಾಳದ ಬಯಕೆ ಮೂಡಿಬಂದಿದೆ. ಮಗು ಸದಾ ಪರಾಧೀನತೆಯನ್ನು ಬಯಸುತ್ತದೆ. ಗಂಡಿನ ದರ್ಪ ನಿರಂಕುಶತ್ವವನ್ನು ಸೂಚಿಸುತ್ತದೆ. ಸ್ವೈರತೆ ತೊರೆದು ದೀನತೆಯನ್ನು ಬೇಡುತ್ತಿರುವ ಗಂಡಿನಲ್ಲಿ ದಾಂಪತ್ಯದ ಸೊಗಸು ಮತ್ತೆ ಅರಳಲಿ ಎಂಬ ಸಮರಸದ ಭಾವವಿದೆ. 'ನೀನು ನಾನು ಬೇರಲ್ಲ' ಎಂಬ ಏಕತೆಯ ಹಾದಿಗೆ ಮನ ವಾಲಿದೆ. ನಿನ್ನ ನಗೆಯ ನಾಗ ಸ್ವರಕ್ಕೆ ನನ್ನೆದೆಯ ಒಲೆದಾಟ ತೂಗಾಟವನ್ನು ಮೆಚ್ಚಿ ನೋಡು ಎಂದು ಕೇಳಿಕೊಳ್ಳುತ್ತಾನೆ.

ಮಲಗಿರುವ ಹಾವನ್ನು
ಕೆಣಕಬೇಡ
ಕಚ್ಚಿ ವಿಷಕಾರಿದರೆ
ತಿಣುಕಬೇಡ
ಸಿಡುಕಿರಲಿ ಮಿಡುಕಿರಲಿ
ಯಾವುದೇ ಒಡಕಿರಲಿ
ಅದರ ಸಪ್ಪುಳವನ್ನು ಮಾಡಬೇಡ
ಹಾಳು ರಾಗವ ಮತ್ತೆ ಹಾಡಬೇಡ

ಎಂದು ಧೈನ್ಯದಿಂದ ವಿನಂತಿಸಿಕೊಳ್ಳುತ್ತಾನೆ. ನಿನ್ನ ಪ್ರೀತಿಯ ನಗುಗಳೇ ನನ್ನ ಜೀವನದ ಬೆಳಕು ನೀನು ನನ್ನ ಜೀವನಕೆ ಬೆಳಕಿತ್ತು ನೋಡು ಮುನಿದರೂ ಕ್ರಮಿಸುವೆನು ಕೂಸಿನೊಲು ರಮಿಸುವೆನು, ಎಂದು ಮನದನ್ನೆಯ ಮನಸ್ಸನ್ನು ಒಲವಿನಿಂದ ಬದಲಾಯಿಸಲು ಪ್ರಯತ್ನಿಸುತ್ತಿದ್ದಾನೆ. ಕಾಮ ಮೀರಿದ ಪ್ರೇಮಕ್ಕೆಳೆದ ಬದುಕು ತಾಯಿ ಮಗುವಿನ ವಾತ್ಸಲ್ಯಕ್ಕೆ ಬದಲಾಗುತ್ತಿದೆ. 'ಕೂಸೆಂದು ಹುಡುಗನೊಲು ಮುತ್ತನಿಡುವೆ' ಎಂದು ತನ್ನ ಮನದನ್ನೆಗೆ ತಾನೇ ತಾಯಿಯಾಗಿದ್ದಾನೆ. ಸತಿ ಪತಿಗಳೊಂದಾದ ದಾಂಪತ್ಯ ಇಡಿಗಾಳಿನಂತಿರುತ್ತದೆ. ಒಡೆದ ಬೇಳೆಯ ಸ್ಥಿತಿಯಲ್ಲಿ ಗಂಡ ಹೆಂಡಿರ ಬದುಕು ಇರದಿರಲಿ ಎಂದು ಹಾರೈಸುತ್ತಾನೆ. ಎರಡು ಬೇಳೆಗಳು ಒಂದಾದರೆ ಒಂದು ಇಡಿಗಾಳಾಗುತ್ತದೆ. ಹಾಗೇ ಸಖ-ಸಖಿಯರು ಒಂದಾದರೆ ಅದೇ ಸುಖೀ ದಾಂಪತ್ಯ. ಇನ್ನೂ ನಾವು ಬದುಕಿನ ಬಂಡಿಯಲ್ಲಿ ಬಹುದೂರ ಸಾಗುವುದಿದೆ. ಮುಂದುವರಿದು ಸಖ ತನ್ನ ಮನದನ್ನೆಗೆ ಹೀಗೆ ಹೇಳುತ್ತಾನೆ.

ಹೊಸ ಹುಟ್ಟು ಬರುವುದಿದೆ ಇನ್ನು ಮುಂದೆ
ಆಗೋಣ ಆ ಜಗದ ತಾಯಿ-ತಂದೆ - '೧೫'

ಮನ್ನದನ್ನೆ ದಾಂಪತ್ಯದಲ್ಲಿ ವಿರಸ ತೋರಿದಾಗ ಅಧೀರನಾಗಿದ್ದ ಪತಿ ಅವಳ ಮನಃ ಪರಿವರ್ತನೆ ಮಾಡುತ್ತಾ ಮುಂದುವರಿಯುತ್ತಾನೆ. ಮುಂದಿನ ಬಾಳನ್ನು ಹೊಸ ಹುಟ್ಟನೊಂದಿಗೆ ಎದುರಿಸಬೇಕಾಗುತ್ತದೆ. ದಾಂಪತ್ಯದಲ್ಲಿ ಸತಿ-ಪತಿಗಳಿರುವ ಜವಾಬ್ದಾರಿ ತಂದೆ ತಾಯಿಗಳಾದಾಗ ಇನ್ನೂ ಹೆಚ್ಚುತ್ತದೆ. ಕಾಯ-ಪ್ರೇಮದ ಮಾಗುವಿಕೆ ವಾತ್ಸಲ್ಯ ಭಾವದಲ್ಲಿ ಪಕ್ವಗೊಳ್ಳುತ್ತದೆ. ವಿರಸದ ಸ್ಥಾನವನ್ನು ಕರ್ತವ್ಯ ಅಲಂಕರಿಸುತ್ತದೆ ಎಂಬ ಆಶಯದ ಹಿನ್ನೆಲೆಯಲ್ಲಿ ಮನದನ್ನೆಯನ್ನು ಸಮಾಧಾನ ಪಡಿಸುತ್ತಾನೆ.

ಬಾಲ್ಯ ಕಳೆದ ಯುವಕ 'ಹಿಗ್ಗಿನದಾರಿ' ಹುಡುಕಿ ಮದುವೆಯ ಹಡಗನ್ನೇರುತ್ತಾಳೆ.

> ನಾನಿಗ ಕಾಮನ ಮೂರ್ತಿ
> ನೀನು ನನ ಪೂರ್ತಿ ರತಿಯೇ ಸತಿ
> ದಿನ ತೆಕ್ಕೆಯೊಳಗ ಸಿಕ್ಕೈತಿ ಸುಗ್ಗಿ ಸ್ವರ್ಗಕ್ಕೆ ಸಾಕ ತೋ ಳೆರಡs

ಎನ್ನುತ್ತಾ ತಾರುಣ್ಯದ ಕಾಮದ ಸುಖದಲ್ಲಿ ಮುಳುಗೇಳುತ್ತಾನೆ. ವಯಸ್ಸು ಮಾಗಿದಂತೆ, ನಿನ ಸ್ಪರ್ಶ ಹರ್ಷದಾ ಚಿಲುಮೆ - ಅಲ್ಲಿ ನಿರಾಟವಾಡುತಿದೆ ಒಲುಮೆ ಎಂದು ಒಲುಮೆ ಬಗ್ಗೆ ಅಚ್ಚರಿಸೂಚಿಸುತ್ತಾನೆ. ಸಂತಾನ ಭಾಗ್ಯ ನೀಡಿದ ಸತಿ, ಮಕ್ಕಳ ಮಾಣಿಕದ ಕಣಿ ಸಿಕ್ಕಿ ನೀ ಚೊಕ್ಕ ಚಿಂತಾಮಣಿ ಎಂದು ಸಂಭ್ರಮಿಸುತ್ತಾನೆ.

> ನಾ ಕಂಡ ಬೆಳಕಿನ ಹೆಣ್ಣುs ನೀನುs
> ನೀನಲ್ಲಿ ಚಿತ್ರದ ಹೆಣ್ಣು '೧೬'

ಎಂದು ತನ್ನ ಸುಖಸಂಸಾರ ಕುರಿತು ಹೆಮ್ಮೆ ಪಡುತ್ತಾ ತನ್ನ ಸುಖ ಸಂಸಾರವನ್ನು ಕಂಡು 'ಚಿಕ್ಕಿಗಳ ರಾತ್ರಿ ಕಣ್ಣ ಮಿಟಕತದ ರಾತ್ರಿ' ಎಂದು ಅಲೌಖಿಕ ಭಾವವನ್ನು ತೋರುತ್ತಾನೆ. 'ಸಂಸಾರ ಗೆದ್ದು ಪರಮಾರ್ಥ' ಎಂಬ ಕವಿತತ್ವ 'ಸಂಸಾರ' ಗೀತೆಯಲ್ಲಿ ಮೂಡಿಬಂದಿದೆ.

ಪತಿ-ಪತ್ನಿಯರು ಪುಂಡಲೀಕ-ಮಹಾಶ್ವೇತೆಯರ ಪ್ರೀತಿಯ ಮಟ್ಟದತ್ತೇರಬೇಕು 'ಬಾ ನಾವು ಫಜಾರಗಟ್ಟೀ ಮುಟ್ಟೋಣ ಬಾ' ಎಂದು ಸಖಿಯನ್ನು ಕರೆಯುತ್ತಿರುವ ಚಿತ್ರ 'ಬಾ ನಾವು ಫಜಾರಗಟ್ಟೀ ಮುಟ್ಟೋಣ ಬಾ' ಗೀತೆಯಲ್ಲಿದೆ.

> ಅಂಗ-ಲಿಂಗದ ಜೋಡಿ ಕೂಡಿ ಹೊಸ
> ಗಿಣೀ-ಗೆಣೆತನs ನೋಡೋಣ ಬಾ
> ತುಂಬೂರ ನಾನಾಗಿ ರೆಂಬೆ ನೀನಾದಾಗ ಸಂಸಾರ ಸಾಪಲ್ಯವಾಗುತ್ತದೆ.
> ಗುರುವಿನಂಗಳದ ಗಿಡ ಬಳ್ಳಿಯಾಗಿ
> ಹೊಸ ಹೂವು ನಾವು ಸುರಿಸೋಣ ಬಾ '೧೭'

ಬೆಂದವರ ಜೀವ ಬೆರಸೋಣ ಬಾ' ಎಂದು ಕವಿ ಸಖಿಯನ್ನು ಕರೆಯುತ್ತಿದ್ದಾರೆ. "ಫಜಾರ ಗಟ್ಟೀ" ಆಡಿ ಸಾರ್ಥಕತೆ ಪಡೆಯೋಣ ಎನ್ನುತ್ತಿದ್ದಾರೆ.

> 'ಮನೆಯ ಹೊತ್ತಿಲಕೆ ಶುಭ ಬರೆಯುವಾಕೆ
> ಮಂಗಲವ್ವ ಬಾರೆಂದು ಕರೆಯುವಾಕೆ
> ಬಾಳ ಸುಳಿಯಲಿ ಬೆಳೆಯ ತೋರುವಾಕೆ
> ದಿನದಿನವು ನವಜಯವ ಕೋರುವಾಕೆ

'ಸಿರಿಗನ್ನಡ' ಗ್ರಂಥಾಲಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಇವಳೇ ಗೃಹಿಣಿ ಎಂದು ಕವಿ ಹೇಳುತ್ತಾರೆ. ಮನೆ-ಮನಕ್ಕೆ ಶುಭ ಕೋರಿ ಹರಸುವವಳು ಗೃಹಿಣಿಯಾದಾಗಲೇ ಅವಳಿಂದ ಬದುಕು ಸಫಲವಾಗುತ್ತದೆ.

ಕೈಗೆ ಕೈ, ಮೈಗೆ ಮೈ, ಬಾಯ್ಗೆ ಬಾಯ್ಗಾದೀತೇ!
ಸಾಗಿ, ಬಿಗಿತಾಗಿ, ಒಂದಾಗಿ, ಹನಿಹನಿಗೂಡಿ
ಮಾಗಿ ಗಡನೊಂದೆ ರಸವಾಗಿ ಜೀವೈಕ್ಯದೊಳು
ಸಂಗಮಿತ ಹೊಳೆಗಳಂತೆ ಜೀವದಗೆಳತಿ ಸಾಗೋಣ ಬಾ! '೧೮'

ಎಂದು ತಮ್ಮ ಜೀವದ ಗೆಳತಿಯನ್ನು ಆಹ್ವಾನಿಸುತ್ತಾರೆ. ಕೈಗೆ ಕೈ, ಮೈಗೆ ಮೈಗಳಲ್ಲಿ ಕಾಮೇಚ್ಛೆ ಪ್ರಬಲವಾಗಿದ್ದರೆ 'ಜೀವೈಕ್ಯದೊಳು ಸಂಗಮಿತ ಹೊಳೆಗಳಂತೆ' ಎಂಬಲ್ಲಿ ಪಾರಮಾರ್ಥಿಕ ಅರ್ಥವನ್ನು ಹೊಳೆಯಿಸುತ್ತಾರೆ.

ಪತ್ನಿಯೊಂದಿಗೆ ದಾಂಪತ್ಯದ ಸರಸ-ವಿರಸಗಳನ್ನು ನೆನೆಯುತ್ತಿರುವ ಸಂದರ್ಭ 'ಬರುವುದೇನೆ ನೆಪ್ಪಿಗೆ' ಗೀತೆಯಲ್ಲಿದೆ. ಸಖೀಗೀತದ ಪ್ರಸ್ತಾವನೆ ಈ ಗೀತೆ ಎಂದು ಸ್ವತಃ ಕವಿ ಹೇಳಿಕೊಂಡಿದ್ದಾರೆ.

ಎಲ್ಲೋ ಏನೋ ನೋಡಿದೆ

ಹಾಗೆ ಒಂದು ಕೂಡಿದೆ' ಯೆಂಬ ರೀತಿಯಲ್ಲಿ ಬದುಕು ಪಲ್ಲವಿಸಿತು.

'ಬದುಕಿನೆಳಗೆ ಜೋತೆವು

ಏನೊ ಏನೊ ನೂತೆವು' ಆದರೆ 'ದುಃಖದ ಶೂಲೆ' ಸದಾ ನೋವನ್ನು ನೀಡಿತ್ತು. ಪತಿ ಪತ್ನಿಯರು ಬವಣೆಗೊಂಡು

130133

'ಸುಖದ ತೊಟ್ಟು ತೊಟ್ಟಿಗಾಗಿ

ಹತ್ತು ಕಡೆಗೆ ಹಣಿಕೆದೆ' ಸುಖ ನೀಡುವ ನೆಲೆ ಆಸರೆ ಎರಡೂ ಇರಲಿಲ್ಲ. ಅಂದ ಮಾತ್ರಕ್ಕೆ ಎದೆಗೆಡದೆ ಪರಸ್ಪರರು -ಪರಸ್ಪರರಿಗಾಗಿ ಆಸರೆಯಾದರು. ವಿರಸಗಳ, ನೋವುಗಳ ಸರಮಾಲೆಯನ್ನು ಮೆಟ್ಟಿ ನಿಂತು ಬಾಳಲು ಸಜ್ಜಾಗುತ್ತಾರೆ.

ನವಚೇತನ ಸೃಷ್ಟಿಯಾಗಿ,
ಇಬ್ಬರನ್ನು ನೂಗಿಕೊಂಡು
ಒಬ್ಬನಾಗಿ ಎದ್ದಿದೆ.
ಸಲ್ಲುವಲ್ಲಿ ಸಂದಿದೆ
ನಿಲ್ಲುವಲ್ಲಿ ನಿಂದಿದೆ
ಬರುವುದೇನೆ ನೆಪ್ಪಿಗೆ
ಜೀವ ಜೀವದಪ್ಪಿಗೆ '೧೯'

ಎನ್ನುತ್ತಾ ಸಖ ತನ್ನ ಸಖಿಯೊಂದಿಗೆ ಕಳೆದ ದಾಂಪತ್ಯದ ಸುಖ-ದುಃಖಗಳನ್ನು ಮೆಲುಕು ಹಾಕುತ್ತಿದ್ದಾನೆ.

ಬಡತನದ ಸಂಕಷ್ಟದ ಬದುಕಿನಲ್ಲಿ ಪತ್ನಿ ಕೇಳಿದ್ದ ಮುತ್ತಿನ ಮಾಲೆಯನ್ನು ನೀಡಲು ಅಸಾಧ್ಯವಾದಾಗ ಪತಿರಾಯ ಕವಿ ಕಾಳಿದಾಸನ ಮೇಘಧೂತವನ್ನು ರಚಿಸಿದ್ದಾನೆ. ಈ ಮೇಘದೂತವು ನಿನ್ನ ಬಯಕೆಯ ಮುತ್ತಿನ ಮಾಲೆ ಒಪ್ಪಿಸಿಕೊಂಡು ಕೊಟ್ಟ ಮಾತಿಗೆ

ಮುಕ್ತಳಾಗು

ಜಯಲಕ್ಷ್ಮಿ, ಚೈತ್ಯಾಕ್ಷಿ

ಚೆನ್ನೆ, ಹೃದಯದ ಸಾಕ್ಷಿ

ನನ್ನ ಕಲ್ಯಾಣಕ್ಕೆ ಯುಕ್ತಳಾಗು '೨೦'

ಎಂದು 'ಸೌಭಾಗ್ಯಲಕ್ಷ್ಮಿ' ಗೆ ಕವನದಲ್ಲಿ ಕವಿ ಪತ್ನಿಯನ್ನು ಬೇಡುತ್ತಿದ್ದಾರೆ.

ಸಖಿ ಮರಣ ಶೈಯಯಯಲ್ಲಿದು ಪಾರಾಗಿ ಬಂದ ಸಂದರ್ಭವನ್ನು 'ಮುತ್ತೈದೆ' ಕಾವ್ಯದಲ್ಲಿ ತಂದಿದ್ದಾರೆ. 'ಗೆದ್ದೆ ಎಂದಳು ಸಾಯಲಿರುವಾಗ ಮುತ್ತೈದೆ' ತನ್ನ ಮುತ್ತೈದೆಯೊಂದಿಗೆ ಹೊರಟು ನಿಂತ ಪತಿ,

ಗೌರಿ ನೀ ಮುಂದಾಗಿ ಹೋಗಿ

ಬಾಗಿಲ ತೆರೆಸು ವೈಕುಂಠದಲಿ

ನೀ ಮುಂದೆ ನಾ ಹಿಂದೆ ಎಂದು ಕೇಳಿಕೊಳ್ಳುತ್ತಾರೆ.

ನಗೆ ಮುಗುಳನರಸಿದಳಾ ಧನ್ಯೆ- ನಿರ್ಮಲ ಕನ್ಯೆ ! '೨೧'

ಅವಳಿಂದ ತನ್ನ ಬದುಕು ಧನ್ಯವಾಗಿದೆ. ತಪಸ್ವಿನಿಯಂತೆ ತನ್ನ ಬದುಕನ್ನು ಕಾದವಳಿವಳು ಎಂದು ಕವಿ ಸಂತೃಪ್ತನಾಗಿದ್ದಾನೆ.

ಕಾಮ ಸಂತೃಪ್ತಿಗೊಂಡ ಪತ್ನಿಯ ಪ್ರೇಮ ಮುಪ್ಪರಿಗೊಂಡು ಪತಿಗೆ ತಾಯಾಗುವ ವಾತ್ಸಲ್ಯಭಾವವನ್ನು 'ಇಳಿವಯಕೆ ನೆನೆಸಿದೆ ಎಳೆಯತನ' ಕವನದಲ್ಲಿ ಕಾಣಬಹುದು. ತಾಯಿ ಅಂಬಿಕೆಯ ನಂತರದಲ್ಲಿ ಮನೆಯ ಹೊಣೆ ಹೊತ್ತ ಲಕ್ಷ್ಮಿಬಾಯಿ ಪತಿಯ ಸಾಹಿತ್ಯಸಿದ್ಧಿಗೆ ಕಾರಣರಾದರು. ಆ ಸಂದರ್ಭವನ್ನು ಕವಿ ಇಲ್ಲಿ ತಂದಿದ್ದಾರೆ.

ಒಬ್ಬ ತಾಯಿಯ ಪಾತ್ರ ಮೈಗರೆವ ಹೊತ್ತಿಗೆ

ನಿನ್ನ ಭೂಮಿಕೆ ಬಂತು ನವ ಮೌನದಿ ಎಂದು ತಾಯಸ್ಥಾನಕ್ಕೇರಿದ ಸಖಿಯ ಕುರಿತು ಕವಿಗೆ ಹೆಮ್ಮೆ ಎನಿಸಿದೆ.

ಅದಕಾಗಿ ಹಾಡಿದೆನು ಅಂದಿನ ಸಖೀಗೀತ

ಇಂದಿದನು ಹಾಡುವದು ಬಾಲಮನ

ತಾಯಿ ಇದ್ದಕಾಲ ಬಾಲ್ಯವಲ್ಲದೆ ಏನು

ಇಳಿವಯಕೆ ನೆನೆಸಿದೆ ಎಳೆಯತನ

ಎಂದು ಎಳೆತನದಲ್ಲಿ ಅಂಬಿಕೆ ಸಲಹಿದ್ದರೆ ಈ ಇಳಿ ವಯಸ್ಸಿನಲ್ಲಿ ತಾಯ ಸುಖವನ್ನು ನೆನಪಿಸುವಂತೆ ನನ್ನನ್ನು ಪೋಷಿಸಿದೆ. ನಾನೀಗ ನಿನ್ನ ಅಧೀನ ಎನ್ನುವ ಪರಾಧೀನತೆಯ ಮಾತನ್ನಾಡುತ್ತಿದ್ದಾನೆ. ಈ ಸಖೀ ಗೀತ ಹಳತಾಗಿದ್ದರೂ

ಪೊಸ ಪೊಸ ಬಗೆಯಲ್ಲಿ

ಹಾಡ ಹಾಡುಗಳಲಿ ಒಂದಾಗಿದೆ

ಸವಿ ನುಡಿಯ ಸೆಲೆಯಿರುವ ಹಾಡಿಗೆ ಮುತ್ತಿಲ್ಲ

ಯಾರೂ ಹಾಡಿದರೂನೂ ಚಂದಾಗಿದೆ '೨೨' ಎನ್ನುತ್ತಿದ್ದಾರೆ.

ದಾಂಪತ್ಯಗೀತ ಸದಾ ಹೊಸತಾಗಿ ಇರುತ್ತದೆ ಎಂಬುದು ಕವಿಯ ಆಶಯ ಸಖೀಗೀತವು 'ಸಖೀ ನಮ್ಮ ಸಖ್ಯದ ಆಖ್ಯಾನ'ದಲ್ಲಿ ಮುಂದುವರಿದಿದೆ ಎನ್ನುತ್ತಾರೆ.

ಸಖಿ ನಮ್ಮ ಸಖ್ಯದ ಆಖ್ಯಾನ ಮುಗಿದಿಲ್ಲ
ಗುರುಸೇವೆ ಉಳಿದಿದೆ ಇನ್ನೂನೂ,
ನೀನಾಗು ಕಿನ್ನರಿ ನಾನು ಕಿನ್ನರನಾಗಿ
ಬಾರಿಸಿ ನೋಡುವೆ ಸಂಧಾನಾ
ನೀ ದೇವ ಗಾಂಧಾರಿ ದೇವ ಗಂಧರ್ವ ನಾ
ದನಿಎತ್ತಿ ಹೇಳುವೆ ನವಗಾನ '೨೩'

ಎಂದು ಸಖಿಯನ್ನು ಗಾಂಧರ್ವ ಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಸಖಿ ತಾಯಾಗುವ ಪ್ರಕ್ರಿಯೆಯನ್ನು ಸೂಚಿಸುವ 'ತಾನಾದಳೋ ತಾಯಿ' ಕವನ ಮರಣೋತ್ತರ ಸಖೀಗೀತ ಎಂದು ಕವಿ ಉಲ್ಲೇಖಿಸಿದ್ದಾರೆ.

ತಾನಾದಳೋ ತಾಯಿ
ನಾನೋ ಬರೇ ಬಾಯಿ
ಸಹಸ್ರಮುಖಿಯೋ ನಮ್ಮ ಸಖೀ
ಊರ್ಧ್ವ ಮುಖೀ ನಾ ದಿವ್ಯಶಿಖೀ
ಸಖೀ! ಸಾಕ್ಷಿ! ಪ್ರೇಕ್ಷಕೀ! ಯಕ್ಷಿ
ಲಕ್ಷಾನುಲಕ್ಷ್ಮೀ -ಲಕ್ಷ್ಮೀ
ಸಮ ನಿನಗಾಽರುಽ?

ಎನ್ನುವಲ್ಲಿ ಜೀವ ಚೈತನ್ಯಕ್ಕೆ ಕಾರಣವಾಗುವ ತಾಯಿಯ ಪ್ರತಿಮೆ ಇಲ್ಲಿ ಕಂಡು ಬರುತ್ತದೆ. ಸಖೀ, ಸಾಕ್ಷಿ! ಪ್ರೇಕ್ಷಕೀ -ಸಮ ನಿನಗಾರು ಎಂಬಲ್ಲಿ ತಾಯ ಸ್ಥಾನದ ಸಖಿಗೆ ಮರಣೋತ್ತರವಾಗಿ ಗೌರವಿಸುತ್ತಿದ್ದಾರೆ.

"ಅಲ್ಲಿಂದಾ ಇಲ್ಲಿಗೇ
ಎಲ್ಲೆಲ್ಲೊ ಎಲ್ಲಿಗೆ
ಮಾತಾಯಿ ಯಾದಳೋ '೨೪'

ಎಂದು ಈಗ ನನ್ನಿಂದ ದೂರವಾಗಿರುವ ಆ ಸಖಿ ತಾಯಿ ಅಂಬಿಕೆಯಂತೆ ಸಖಿಯಾಗಿದ್ದಾಳೆ ಎಂಬ ಭಾವವಿದೆ. ಸಾವಂಚಿಗೆ ನಿಂತ ಸಖೀ-ಸಖನನ್ನು 'ಹೋಽದಬುಧವಾರಾ ಬರಽಽಽಽಲೊಲ್ಲು ಎಂದು ಕೇಳಿದ್ದ ಪ್ರಶ್ನೆ ಸಾವಿನ ಆರು ದಿನಗಳ ನಂತರ ನೆನಪಾಗಿದೆ. ನೀ ಹೊರಗೆ ಬಿದ್ದ ಅಂತ ಪ್ರಕಾರಽ ಆತು -ಕೇರಿಯಲ್ಲೆಲ್ಲಾ ನೀ ಸತ್ತ ಸಾವಿನ ಸುದ್ದಿ, ಆದರೆ ಬಾಳಿನ ಸಖ ಮಾತ್ರ ಅದನ್ನು ನಂಬಲಾರದೆ, ಒಪ್ಪಲಾರದೆ' ನೀ ಬಳಿಗೆ ಇದ್ದಿ' ಅಂತ ಪಿಸುಮಾತಿನಲ್ಲಿ ಹೇಳಿಕೊಳ್ಳುತ್ತಿದ್ದಾನೆ. ದೀರ್ಘ ದಾಂಪತ್ಯದ ಏಳು-ಬೀಳಿನ ಸುಖ-ಸಂತೋಷದ ಗಳಿಗೆಗಳು, ಸಖಿಯ ವಿರಹವನ್ನು ಸಹಿಸದ ವಿವರ ಈ ಕವನದಲ್ಲಿ ಚಿತ್ರಿತವಾಗಿದೆ. ತನ್ನ ಸಾಹಿತ್ಯದ ಶಕ್ತಿಗೆ, ಬದುಕಿಗೆ, ಮಕ್ಕಳಿಗೆ ಪ್ರೇರಕ ಶಕ್ತಿಯಾಗಿದ್ದ ಸಖಿಯ ಬಗ್ಗೆ 'ಕಾವ್ಯ ನಮನ ಈ ಕುಣಿ-ಗುಣಿ ಗೀತೆ' 'ಮುತ್ತು ರತ್ನದಂತಹ ಹೆಣ್ಣು ನೀನು ಕೈ ಹಿಡಿದ ತಪ್ಪಿಗೆ ನನ್ನ ಕೈ ಕೊಸರಬ್ಯಾಡ ಇನ್ನ' ನನ್ನ ಕುಡುಹಿನ ನಾಲಿಗೆಯಲಿ ನೀನೇ ಕುಣಿ, ನೀನೇ ಗುಣಿ! ಎಂದು ಕೃತಜ್ಞತೆಯನ್ನುಸಲ್ಲಿಸುತ್ತಿದ್ದಾನೆ.

ಪತ್ನಿ ತನ್ನ ಮಗುವೊಂದನ್ನು ಕಳೆದುಕೊಂಡ ಸಂದರ್ಭ ಎದುರಿಗೆ ಬಂದ ಪತಿಯನ್ನು ನೋವು ತುಂಬಿದ ದೃಷ್ಟಿಯಲ್ಲಿ ನೋಡುತ್ತಾಳೆ. ಮಗುವಿನ ಮರಣದ ದುಃಖ ಒಂದೆಡೆಯಾದರೆ ನೋವನ್ನು ಅನುಭವಿಸುತ್ತಿರುವ ಪತ್ನಿ ಮತ್ತೊಂದೆಡೆ ಅವಳ ನೋವಿನ ದೃಷ್ಟಿ ಈತನನನ್ನು ತೀವ್ರವಾಗಿ ಮೀಟಿದಾಗ ಪತಿಯ ಸಂತೈಸುವಿಕೆ, 'ನೀ ಹೀಂಗ ನೋಡಬ್ಯಾಡ ನನ್ನ' ಗೀತೆಯಲ್ಲಿದೆ ಯಾವುದೇ ಪೀಠಿಕೆ ಇಲ್ಲದಂತೆ ನೇರವಾಗಿ ಕಾವ್ಯಾರಂಭವಾಗಿದೆ.

'ನೀ ಹೀಂಗಾ ನೋಡಬ್ಯಾಡ ನನ್ನ

ನೀ ಹೀಂಗ ನೋಡಿದರೆ ನನ್ನ ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ' ಎಂದು, ನಿನ್ನಷ್ಟೇ ನನಗೂ ನೋವಾಗಿದೆ. ನಿನ್ನ ತೀಕ್ಷ್ಣ ದೃಷ್ಟಿಯನ್ನು ಎದುರಿಸಲು ಸಾಧ್ಯವಾಗುತ್ತಿಲ್ಲ ಎಂದು ಸಮಾಧಾನಿಸುತ್ತಾರೆ. ಸಂಸಾರ ಸಾಗರದಲ್ಲಿನ ದುಃಖದ ಬಂಡಿಯ ಆಚೆ ದಂಡಿಯ ಬಗ್ಗೆ ಗೊತ್ತಿರದ ನಾವು ದುಃಖಿಸದೆ ಇರೋಣ. ಕೂಸು ಕೈ ಬಿಟ್ಟಿದೆ, ಅದು ದೇವರ ಚಿತ್ತ. ಆದರೆ ನೀನು ಮತ್ತೆ ಮತ್ತೆ ನನ್ನನ್ನು ನೋಡಿ ನೋವ ಹೆಚ್ಚಿಸಬೇಡ. ಮಗುವಿನ ಸಾವಿನ ನೋವು ಮನೆಯಲ್ಲೆಲ್ಲಾ ಹರಡಿದೆ ನಿನ್ನ ಮಾರಿ, ನಿನ್ನ ನಲ್ಲ, ಹಣಿ, ಕಣ್ಣು ಎಲ್ಲವೂ ಸಾವಿನ ಸವರುವಿಕೆಯಿಂದ ಮಾರಿಯ ಭೀತಿಗೆ ಒಳಗಾಗಿದೆ. ಬದುಕು ಬೂದಿ ಮುಚ್ಚಿದ ಕೆಂಡದಂತದ್ದು ಎಂದು ಈಗ ತಿಳಿದಿದೆ. ನಾನು ದೇವರಂತೆ ತಿಳಿದೀಯೇನ ನೀ ನನ್ನ ಎಂದು ಪ್ರಶ್ನಿಸುತ್ತಾ ನೋವಿನ ಸಂಕಟವನ್ನು ಮರೆಮಾಚದೆ ಅನುಭವಿಸಿ ಬಿಡು. ಹಿಂದಿನ ಲವಲವಿಕೆಯನ್ನು ಕಳೆದುಕೊಂಡು ನಿಂತಿರುವ ನಿನ್ನನ್ನು ನೋಡಿದರೆ ದಿಗಿಲಾಗುತ್ತಿದೆ.

"ಹುಣ್ಣಿಮೀ ಚಂದಿರನ ಹೆಣ ಬಂತೋ ಮುಗಿಲಾಗ ತೇಲಿತ ಹಗಲ!" ಎನ್ನುವ ರೂಪಕ ದುಃಖದ ತೀವ್ರತೆಯನ್ನು ತೋರುತ್ತದೆ. ಇಂದಿನವರೆಗೂ ಸಖೀ ಇದ್ದ ಸೊಗಸನ್ನು ನೆನೆದು ಸುಖಿಸುತ್ತಾ, ಈಗ ಸೊರಗಿದ ವ್ಯಕ್ತಿತ್ವದ ಕುರಿತು ಕಳಕಳಿ ಇದೆ. ದಾಂಪತ್ಯದಲ್ಲಿನ ಕಷ್ಟ ಕೋಟಲೆಗಳಿಗೆ ಸಾವಿಗೆ ಎದುರಾದ ಮನಸ್ಸು, ಬದುಕುಗಳು ಅಘಾತಗೊಳ್ಳುವ, ಸ್ಥಗಿತಗೊಳ್ಳುವ ಅಂಶ ಇಲ್ಲಿ ಚಂದಿರನ ಹೆಣದ ಪ್ರತಿಮೆಯಿಂದ ಮೂಡಿ ಬಂದಿದೆ.

ಅಳು ಮರೆಸಲು ಹುಚ್ಚು ನಗಿ ನಗಬೇಡ
ಹನಿ ಒಡಯಲಿಕ್ಕೆ ಬಂದಂತ ಮಾಡ ತಡಧಾಂಗ ಗಾಳಿಯ ನೆವಕ
ಅತ್ತಾರೆ ಅತ್ತು ಬಿಡು ಹೊನಲು ಬರಲಿ ನಕ್ಯಾಕ ಮರಸತಿದುಕ್ಕ,
ತುಟಿ ಕಚ್ಚಿ ಹಿಡಿಯದಿರು ದುಃಖ

ಎಂದು ಸಂತೈಸುವಿಕೆಯಿಂದ ಸಖಿಯ ದುಃಖಕ್ಕೆ ತಾನೂ ಪಾಲುದಾರನಾಗಿದ್ದಾನೆ. ಈ ಕವನದಲ್ಲಿ ಆಡು ಮಾತಿನ ಮೂಲಕ ತೀವ್ರವಾದ ಭಾವನೆಗಳನ್ನು ಅಭಿವ್ಯಕ್ತಗೊಳಿಸುವಲ್ಲಿ ಬೇಂದ್ರೆ ಯಶಸ್ವಿಯಾಗಿದ್ದಾರೆ. ತನ್ನ ಒಲವು, ನಿಲುವು, ಉದ್ವೇಗ, ಸುಖ-ದುಃಖ, ಕಾತರ-ಕಳವಳಗಳನ್ನು ಈ ಭಾವಗೀತೆಯಲ್ಲಿ ಪ್ರಕಟಿಸಿದ್ದಾರೆ. ಇದು ಕಲಿಯ ವೈಯಕ್ತಿಕ ಬದುಕಿನ ಚಿತ್ರಣ. 'ಒಡಲ ನೂಲಿನಂತೆ ನೀಯುನಂತೆ ಬೇಡಾ ಬಾಲ' ವಾಗಿ ಈ ಗೀತೆ ಮೂಡಿ ಬಂದಿದೆ.

ಕಾಮದಾಟ ಮುಗಿಸಿದ ಗಂಡು ನಲ್ಲೆಯನ್ನು ತೊರೆದು ಹೋಗಿದ್ದಾನೆ. ಆ ಆಟ-ಪಾಟವನ್ನು ನೆನೆದುಕೊಂಡು ದುಃಖಿಸುತ್ತಿರುವ ನಲ್ಲೆಯ ನಿಸ್ಸಹಾಯಕ ಅನುಭವ ಈ ಭಾವಗೀತೆಯಲ್ಲಿ ಮೂಡಿ ಬಂದಿದೆ.

ತಾವರಿ ಹೂವಾಗಿ ಯಾವರಿಗರಳಿತ್ತೋ
ಅವರಿಗೆ ತುಂಬಿ ತುಂಬ್ಯಾವ, ಬಾಡುತಲೆ
ತಾವ್ಯಾರೊ ಎಂದು ತೆರಳ್ಯಾವ '೨೬'

ಹೆಣ್ಣಿನ ಬಾಳು ಇಷ್ಟೇ ಎಂಬ ನೋವಿನ ಅರಳಿದ ತಾವರೆಯ ರಸ ಉಂಡಿ ತುಂಬಿ ಬಾಡಿದ ತಕ್ಷಣ ಬಿಟ್ಟು ತೆರಳಿದ ಪ್ರಣಯಿದಾಟದ ನೆನೆಪೊಂದೆ ಉಳಿದ ದೃಶ್ಯ ಚಿತ್ರಿತವಾಗಿದೆ. ಕಾಮವೇ ಪ್ರಧಾನವಾಗಿ ಪ್ರೇಮದ ತುಡಿತ ಇಲ್ಲವಾಗುವ- ಕನಿಷ್ಟವಾಗುವ ಮನುಷ್ಯ ಸಂಬಂಧ ಚಿತ್ರಣ ಇಲ್ಲಿದೆ. ಪ್ರೇಮವಿಲ್ಲದ ಕಾಮ ನೋವ ಮಾಲೆಯಾಗಿ ಉಳಿದಿದೆ.

ಜಂಗಮನ ಬೆಂಬೆತ್ತಿ ಹೋದ ಹೆಣ್ಣಿಗೆ 'ಜಂಗಮ' ಮನೆಗೆ ಹೋಗವ್ವಾ ಎಂದು ಕಳಿಸುತ್ತಿದ್ದಾನೆ.

ಬಂದೆವ್ವಾ ಕಾಮ ಹೊಟ್ಟೆಯೊಳಿಟ್ಟು
ನಿಂದೆವ್ವಾ ನೀರೆ, ನಾಚಿಕೆ ಬಿಟ್ಟು
ನೀಗವ್ವಾ! ಅದನ ನೀಗವ್ವಾ!
ಹೇ! ಹೋಗವ್ವಾ! ಮನೆಗೆ ಹೋಗವ್ವಾ! ಮನೆಗೆ ಹೋಗವ್ವಾ! '೨೭'

ಕಾಮದ ಕಿಚ್ಚಿನಿಂದ ಬೇಯುತ್ತಾ ಬಂದಿರುವ ಹೆಣ್ಣಿಗೆ ಆ ಕಾಮವನ್ನು ನೀಗಿ ಪಾರಮ್ಯದ ಕಡೆಗೆ ಸಾಗಿ ಹೋಗು ಎಂದು ಜೋಗಿ ಹೇಳುತ್ತಿದ್ದಾನೆ. ಕಾಮ ಪ್ರೇಮವಾದಾಗ ಅದರ ಕಿಚ್ಚು ಎಲ್ಲರನೂ ಸುಟ್ಟೀತು ಆದ್ದರಿಂದ ಕಾಮವನ್ನು ಭಕ್ತಿಯಾಗಿ ಪರಿವರ್ತಿಸಿಕೋ ಎಂದು ಉಪದೇಶಿಸುತ್ತಿದ್ದಾನೆ.

ಪ್ರೀತಿ ಎಂಬ ಮಾತಕೇಳಿ
ರೆಕ್ಕೆಗೊಂಡು ಹಾರಿತು
ರೆಕ್ಕೆಗೊಂಡು ಸಾರಿ ಜೀವ
ಕೈಲಾಸಕ್ಕೇರಿತು ಪ್ರೀತಿ

ಪ್ರೀತಿಯಲ್ಲಿ ಮಿಂದವರಿಗೆ ಕೈಲಾಸಕ್ಕೇರುವ ಶಕ್ತಿ ಇದೆ. ಶಿವ-ಶಿವೆಯರ ನಡುವಿನ ಪ್ರೀತಿ ವಿವರವನ್ನು ಕವಿ,

ಬೂದಿಬಡಕ ಗಂಡಿನಲ್ಲಿ
ಬಳ್ಳಿಯಂಥ ಮಳ್ಳಹೆಣ್ಣು
ನವರಸವನ್ನುಂಡಿತು

ಎಂದು ವರ್ಣಿಸುತ್ತಾರೆ. ಆದರೆ ನವರಸವನ್ನುಂಡ ಹೆಣ್ಣು

ಗಂಡ ಕೆಡಗಿ ಕುಣಿದಿತು
ತುಳಿದು ತುಳಿದು ದಣಿದಿತು '೨೮'

ಇಂತಹ ಸ್ವಾರ್ಥಮಯ ದೈಹಿಕ ಕಾಮ-ನಿಸ್ವಾರ್ಥದೆಡೆಗೆ ಸಾಗರಿದಾಗ ಪ್ರೀತಿ ಕೈಜಾರಿ ಹೋಗುತ್ತದೆ ಎಂಬ ಭಾವ 'ಪ್ರೀತಿ' ಕವನದಲ್ಲಿದೆ.

ಗಂಡು-ಹೆಣ್ಣುಗಳ ನಡುವಿನ ಪ್ರೇಮ ಸಾಮರಸ್ಯವನ್ನು 'ನಾನು-ನೀನು' ಕವನದಲ್ಲಿ ಹೀಗೆ ವಿವರಿಸುತ್ತಾನೆ.

ನಾನು ಸರಸಿ ನೀನು ಅರಸ
ಆಳಿ ನೋಡು ಬಾ
ನಾನು ನೀರೆ ನೀನು ನಲ್ಲ
ಬಾಳಿ ನೋಡ ಬಾ '೨೯'

ಎನ್ನುತ್ತಾ ತನ್ನನ್ನು ಹೆಣ್ಣಿಗೆ ಅವನನ್ನು ಗಿಳಿಗೆ ಹೋಲಿಸಿಕೊಳ್ಳುತ್ತಾ ಒಂದು ಮಾಡಲು ಕರೆಯುತ್ತಿದ್ದಾನೆ.

ತಾನು ನೋಟವಾದರೆ ಅವನು ಕಣ್ಣು- ಕಣ್ಣ ನೋಟದಲ್ಲಿ ಬೆಳಕು ನೀಡು ಬಾ ಎಂಬ ಕರೆಯಲ್ಲಿ ನಾನು-ನೀನಿನ ಅನನ್ಯತೆ ವ್ಯಕ್ತವಾಗಿದೆ. ಪ್ರಕೃತಿ ತಾನು ಪುರುಷ ನೀನು ಒಂದಾಗೋಣ ಬಾ. ದಾಂಪತ್ಯದ ಜೀವಗೀತ ಹೀಗೆ ಇರಬೇಕು ಎಂಬ ಅಂತರ್ಯ ಭಾವ ಇಲ್ಲಿದೆ.

ಸಂಸಾರ ಸಾಗರದಲ್ಲಿ ಪ್ರೇಮವೆಂಬ ದೀಪ ಸದಾ ತೇಲುತ್ತಿರಲಿ. ಕಷ್ಟನಷ್ಟಗಳ ಸುಳಿಗಾಳಿ, ಬಿರುಗಾಳಿಗೆ ಸಿಲುಕಿ ನಂದಿ ಹೋಗದಿರಲಿ ಎಂಬ ಆಶಾದಾಯಕ ಬಯಕೆ ಕವಿಯಲ್ಲಿದೆ. ದಾಂಪತ್ಯದ ಜೀವನ ಸಾಮರಸ್ಯ ಹೀಗಿರಲಿ ಎಂಬ ಬವಣೆಯಲ್ಲಿ ಮೂಡಿಬಂದ ಭಾವಗೀತೆ 'ದೀಪ'

ನಾನು ನೀನು ಜೊತೆಗೆ ಬಂದು
ಈ ನದಿಗಳ ತಡಿಗೆ ನಿಂದು
ಸಾಮರಾಗದಿಂದ ಇಂದು
ದೀಪ ತೇಲಿ ಬಿಟ್ಟೇವೇ
ದೀಪ ತೇಲಿ ಬಿಟ್ಟೇವ '೩೦'

ತೇಲಿ ಬಿಟ್ಟಿರುವ ದೀಪ ನಂದದಿರಲಿ ಎಂಬ ಹಾರೈಕೆ. ಕವಿ ಒಲವಿನ ನಲಿವಿನಲ್ಲಿ ಸುಖಿಸಿದವರು. ದೈಹಿಕ ಕಾಮ, ಮಾನಸಿಕ ಪ್ರೇಮವಾಗಿ ಪರಿವರ್ತಿತವಾಗುವ ಸೃಜನಶೀಲತೆಯನ್ನು ತುಂಬ ಗೌರವದಿಂದ ಕಂಡಿದ್ದಾರೆ. ಭಾರತೀಯ ದಾಂಪತ್ಯದ ಹಿನ್ನೆಲೆಯಲ್ಲಿ ಕಾಮದ ಉದ್ದೇಶ ಸಂತತಿಯ 'ಚಿರಂತನಾ'ಕ್ಕಾಗಿ ಸತಿ-ಪತಿಯರು, ತಂದೆ-ತಾಯಿಯರಾದಾಗ ಅವರ ಕಾಮ-ಪ್ರೇಮವಾಗಿ ಪಕ್ವವಾಗಿರುತ್ತದೆ. ಪ್ರೇಮ ಮತ್ತೆ ವಾತ್ಸಲ್ಯದ ನೆಲೆಯಲ್ಲಿ ಅರಳಿಕೊಳ್ಳುವ ಬಗೆಯೂ ಪ್ರೇಮದ ಮತ್ತೊಂದು ಆವಿಷ್ಕಾರ. ಬೇಂದ್ರೆ ಅವರ ಕಾವ್ಯಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳ ಕಾಮ-ಪ್ರೇಮ ಸ್ವರೂಪ ಪ್ರಾರಂಭದ ಹಂತದಾಗಿದ್ದರೆ ಸಖ-ಸಖಿಯರ ಸಾಮರಸ್ಯದಲ್ಲಿ ಸಾಂಗತ್ಯದಲ್ಲಿ ದಾಂಪತ್ಯದ ಸಾರ್ಥಕತೆಯನ್ನು ಕಾಣುವುದು ಮುಂದಿನ ನಲೆಯಾಗುತ್ತದೆ. ಸಂತಾನ-ಸಂತತಿಯಲ್ಲಿ ತಂದೆ-ತಾಯಿಯಾಗಿ ವಾತ್ಸಲ್ಯ ಸೂಸುವ ಬಗೆ ಮುಂದಿನ ಸಾಫಲ್ಯದ ಹಂತವಾಗಿದೆ.

### ೫.೩ ವಿರಹ ಗೀತೆಗಳು

ನಲ್ಲ ನಲ್ಲೆಯರ ಅಗಲಿಕೆಯಿಂದ ದೈಹಿಕ ಕಾಮ ಪರಿಪಕ್ವವಾದ ಪ್ರೇಮವಾಗುತ್ತದೆ. ಪರಸ್ಪರರ ವ್ಯಕ್ತಿತ್ವದ ಶೋಧನೆಗೆ ವಿರಹಾವಸ್ಥೆ ಸೂಕ್ತ ನೆಲೆಯಾಗುತ್ತದೆ. ತಮ್ಮೊಳಗಿನ ಲೈಂಗಿಕಾಸಕ್ತಿಯನ್ನು ಪ್ರೇಮವಾಗಿ ಮಾಗಿಸಿಕೊಳ್ಳುತ್ತಾ ತಮ್ಮೊಳಗನ್ನು ಶೋಧಿಸಿಕೊಳ್ಳುವ ಈ ಹಂತ, ಪ್ರೇಮದ ವಿಭಿನ್ನ ಸ್ತರಗಳಲ್ಲಿ ಮಹತ್ವದ್ದಾಗಿದೆ. ಕವಿ ಬೇಂದ್ರೆ ವಿವಾಹಪೂರ್ವದ ವಿರಹಾವಸ್ಥೆಗಳೊಂದಿಗೆ ದಾಂಪತ್ಯ ವಿರಹವನ್ನು ಭಾವಪೂರ್ಣವಾಗಿ ಕಾವ್ಯವನ್ನಾಗಿಸಿದ್ದಾರೆ.

ವಿರಹದ ಕಿಚ್ಚನಲ್ಲಿ ಬೇಯುವ ಜೀವ ತನ್ನನ್ನು ತಾನು ನಿಕಷಕ್ಕೆ ಒಡ್ಡಿಕೊಂಡಿರುತ್ತದೆ. ಪುಟಕ್ಕಿಟ್ಟುಕೊಂಡ ಜೀವ ಪ್ರೀತಿಯ ಹೆಸರಲ್ಲಿ ಪರಿಪೂರ್ಣವಾಗುತ್ತದೆ. ಸುಗ್ಗಿಯ ಸಮೃದ್ಧತೆ ಅಗಲಿಕೆಯ ನೋವನ್ನು ಮತ್ತಷ್ಟು ಹೆಚ್ಚಸುತ್ತಿದೆ. ಎಂಬ ವಿವರವನ್ನು 'ಒಲುಮೆಯ ಕಿಚ್ಚು' ನೀಡುತ್ತದೆ. 'ಅವನ ನೆನಪು ಅವಳಲ್ಲಿ ಸೃಷ್ಟಿಸಿದ ಬೇಗುದಿಯನ್ನು ಹೀಗೆ ತೊಡಿಕೊಳ್ಳುತ್ತಿದ್ದಾಳೆ

ಆಡಿ ಜೀವದ ಗಾಣಾ
ನೋಡ ಹಿಂಡಿತು ಪ್ರಾಣಾ
ಸಾಗ್ಯದ ನನ್ನ ಹರೆಯವು ಕೋಗಿಲಾ
ಕೂಗಿ ಕರೆತಾರ್‍ಯ ಸುಗ್ಗಿಯಾ

ಸುಗ್ಗಿಯ ಸಮೃದ್ಧತೆ ನಲ್ಲನ ಪ್ರೀತಿಯನ್ನು ಮರುಕಳಿಸುವಂತೆ ಮಾಡುತ್ತದೆ. ವಿರಹ ಹೆಚ್ಚುತ್ತದೆ. ಆದರೂ ವಿರಹಿಯ ಕಾತುರತೆ ಒಂದೆಡೆಗೆ ಸ್ಥಾಯಿಯಾಗುವಂತಿಲ್ಲ.

ಒಲುಮೆಯ ನಚ್ಚೊಂದು ಕುಲುಮೆಯ ಕಿಚ್ಚವ್ವ
ಹುಲು ಜೀವ ಕಾಡು ಕಾಕಮರೀತು ಒಳಜೀವ

ಒಲುಮೆಗೆ ಹ್ಯಾಂಗೋ ಬಾಳೀತು ಒಲುಮೆಯ ಕಿಚ್ಚಿನಲ್ಲಿ ಬೆಂದ ಜೀವ, ಒಲುಮೆಯನ್ನೇ ನಂಬಿ ಬದುಕಿದೆ. ಸಾರ್ಥಕ್ಯವನ್ನು ಪಡೆದಿದೆ.

ವಿರಹದ ಬೇಗೆ ಪ್ರೇಮವನ್ನು ಸಂಪನ್ನ ಗೊಳಿಸುತ್ತದೆ 'ರಾಧೆಯ ಪಾಡು'ಗೀತೆಯಲ್ಲಿ ತನ್ನ ಸಖಿಯಾದ ರಾಧೆಯನ್ನು ಪ್ರಶ್ನಿಸುವ ಸಂದರ್ಭವನ್ನು ಚಿತ್ರಿಸಿದ್ದಾರೆ.

ಮುಂದೇನೆ? ಸಖಿ! ಮುಂದೇನೇ?
ರೂಪ ಗುಣಕೆ ಮೆಚ್ಚಿ
ಬಂದನೆಂದನು ಹುಚ್ಚಿ
ಅಂದೇನೇ! ಮನದಿ? ಅಂದೇನೇ ? ಗೊಲ್ಲನನ್ನು ಮೆಚ್ಚಿ
ಬಳಗವೆಲ್ಲದ ಬಿಟ್ಟು ಬಂದ ವಿರಹ ಕಾತರೆ ರಾಧೆಯನ್ನು ಸಖಿ ಪ್ರಶ್ನಿಸುತ್ತಿದ್ದಾಳೆ
ಮುಂದೇನ ಸಖಿs ಮುಂದೇನs!
'ಕರಣ ಕಳವಳಿಸೀವೆ ಹರಣ ತಳಮಳಿಸೀದೆ' ಅವನು ಬಂದಾನೆ ? ಬಾರನೆ ?

ಹಿಂದು - ಮುಂದು ಆಲೋಚಿಸಿದೆ ಕೃಷ್ಣನಿಗಾಗಿ 'ಎಲ್ಲ'ವನ್ನೂ ತೊರೆದು ಬಂದ ರಾಧೆ ಚಿಂತಿಸುತ್ತಿದ್ದಾಳೆ. ಅವನು ಬಾರದೆ ಹೋದರೆ ರಾಧೆಯ ಗತಿ !

'ಮುಡಿಯ ಮಲ್ಲಿಗೆ ಯಮುನೆಯ ದಂಡೆಯೊಳು ಒಗೆದು, ಹೊಳೆಯೊಳು ನಾ ಸತ್ತಾರೆ ಹೊಂದೇನೆ ? ಅವನ ಹೊಂದೇನೆ?' ಎಂದು ರಾಧೆ ಕಳವಳ ಪಡುತ್ತಾಳೆ. ಸಖನಿಲ್ಲದ ಬದುಕಿಗೆ ಅರ್ಥವೇನಿದೆ? ಸಾವೇ ಮುಕ್ತಿ ಎಂದು ಹೊರಟವಳ ನೋವಿಗೆ ಸ್ಪಂದಿಸುವ

ನಾನೆಲ್ಲಿ ಹೋಗಿದ್ದೆ
ನಿನ್ನ ಎದೆಯೊಳಗಿದ್ದೆ
ನಿಂದೇನೆ ? ಹೊರಗೆ ಬಂದನೆ '೨'

ಎಂಬ ಮೋಹಕ ಉತ್ತರವನ್ನು ನೀಡುತ್ತಾನೆ. ಅವುಗಳೊಂದಿಗೆ ಹೊರಟ ಗೋಪಿ ಇದ್ದಕ್ಕಿದ್ದಂತೆ ನಡುಬೀದಿಯಲ್ಲಿ ತಿರುವುಗಿವಿಯಾಗಿ ನಿಂತಿದ್ದಾಳೆ. ನೋಡಿ ಕಾಣದಂತೆ, ಕೇಳಿ ಕೇಳದಾಗಿ, ಹೇಳ ಹೋಗಿ ಆಡದೇನs ಕಣ್ಣ ನೀರ ಸುರಿಸಿ ನಿಂತ ಗೋಪಿಯ ಭ್ರಮೆಗೆ ಸಖಿ ಕೊಳಲನೂದಿದನೇನs ಕೃಷ್ಣ? ಕೊಳ್ಳಲುನೂದಿsದಾ ಎಂದು ಪ್ರಶ್ನಿಸುತ್ತಿದ್ದಾಳೆ.

ಜೀವ ಸೂತ್ರಧಾರ ನಿಮ್ಮ
ಪಾತ್ರ ವಾಡಿಸುs ವನೇನs
ರಂಗ ತಾನು ಇದ್ದಲ್ಲಿಂದ
ತನ್ನ ನಲ್ಲೆಯರಿಗೆಲ್ಲಾ

ಗಾಳಿ ಸುಳಿಯ ತಾನವಿಡದು

ಮುದ್ದ ತೇಲಿ ಬಿಟ್ಟನೇನ್ಸ'ಖ'

ಎಂದು ಸಂತೈಸುತ್ತಾಳೆ. 'ರಾಧಾ-ಕೃಷ್ಣರ' ಅಮೂರ್ತ ಪ್ರೇಮದ ಅಲೌಕಿಕ ಚಿತ್ರಣ 'ಕೊಳಲನೂದಿದನೇನ ಕೃಷ್ಣ' ಕಾವ್ಯದಲ್ಲಿದೆ. ಆನಂದ ಸಮಾಧಿಯಲ್ಲಿ ಮೈ ಮರೆತ್ತಿದ್ದ ಗೋಪಿ 'ಕೊಳಲ-ನೂದಿದ ನೇನಽ ಸ್ವಾಮಿ', ಕೊಳಲನೂದಿದನೋ ಗೆಳೆಯ' ಕಾವ್ಯಗಳಲ್ಲಿ ಹೀಗೆ ಉತ್ತರಿಸುತ್ತಾಳೆ. ಪ್ರಣಯ ಭಾವದಲ್ಲಿ ಭಿನ್ನ ಭಾವ ಮರಸಿ ಕಲೆತು / ಬೆರೆತು ಇಲ್ಲೆ ಒಡನಾಡಿದ ! ನಾನು-ನೀನು ಎಂಬ ಭಿನ್ನತೆ ಇಲ್ಲವಾಗಿ ತೆಗೆಗೆ ಹಾಲು ತುಂಬಿದಂತೆ' ಒಂದಾಗಿರುವ ಭಾವ ಇದು. ಕಣ್ಣ ತುಂಬಿ ಮೈಯ ತುಂಬಿ / ಹಣ್ಣಗೊಳಿಸಿ ಹದಕೆ ತಂದು / ಅನನ್ಯ ವಾಗಿದ್ದಾರೆ. ಜೀವ ಮಿಡಿಸಿ ನುಡಿಸಿ ನುಡಿಸಿ ತಾಯಿ ಬಾರೆ ಎನ್ನುವಂತೆ ಸ್ವಾಮಿ ಕೊಳಲೂನೂದಿದನೋ ಎನ್ನುವಲ್ಲಿ ನಲ್ಲೆಯ ಸಾನ್ನಿಧ್ಯದಲ್ಲಿ ತಾಯ ಕಾಣುವಂತೆ ಮಾಡಿದೆ. ಗೆಳೆಯನ, ಕೊಳಲಿನ ಕರೆಗೆ 'ಜಡವೆ ಜಂಗಮವಾದಿತಿಲ್ಲಿ' ಎನ್ನುತ್ತಾಳೆ. ನಿರ್ಜೀವಗೊಂಡ ಬದುಕು ಜೀವಗೊಳ್ಳುವ, ಅಚೇತನಕ್ಕೆ ಚೈತನ್ಯರಸವನ್ನು ಬಲಗೊಳ್ಳುವ ಶಕ್ತಿ ಈ ಪ್ರೀತಿಗಿದೆ. ಪ್ರೀತಿ-ಭಕ್ತಿಯಾಗುವ ಸಂದರ್ಭ ಇದು.

'ಕನ್ನಡ ಮೇಘದೂತ'ದಲ್ಲಿ ಕವಿಯು, ಕಾಮ - ಪ್ರೇಮದ ಆಟ-ಕೂಟವನ್ನು ವರ್ಣಿಸಿದ್ದಾರೆ.

'ತಾನು ಉಂಡ ಎದೆಯೊಲುಮೆ ತಾನು, ಪಡೆದ ಹೆಣ್ಣು' ಈ ವಿವರವನ್ನು ಯಕ್ಷ ಮೋಡದ ನೆವದಿಂದ ಹಾಡಿದ್ದಾನೆ. ಕಾಮವು ಕಾಮುಕತೆಯಲ್ಲ ಮೂಲತಃ ಕಾಮವು ಬ್ರಹ್ಮ ಸೃಷ್ಟಿ - ಸಂಕಲ್ಪ - ಇಚ್ಛಾಶಕ್ತಿ. ಈ ಬ್ರಹ್ಮ ಕಾಮದ ಸಾಫಲ್ಯ ಲೀಲೆಯೇ ಈ ವಿಶ್ವ ಲೀಲೆಯಾಗಿದೆ. ಕವಿ ತಮ್ಮ ಕಾವ್ಯದ ಪೀಠಿಕೆಯಲ್ಲಿ ಈ ವಿವರವನ್ನು ಅಧ್ಭುತವಾಗಿ ವ್ಯಕ್ತಪಡಿಸಿದ್ದಾರೆ.

"ಬ್ರಹ್ಮ ಹೃದಯದಲ್ಲಿ ಜನಿಸಿಚ್ಛೆ ಕೊನೆಗಾಣಲೆಂದು ಬಾಳಿ

ಕಂಡ ಕಡೆಗು ಶತ ರೂಪೆಯಲ್ಲಿ ಮಧು-ರೂಪ-ರೂಪತಾಳಿ

ಜಗದ ತಂದೆ-ತಾಯಿಯರ ಕಂದ ಅವತರಿಸ ಜೀವನಾಗಿ

ಬಂತು ಪೂರ್ವದಲಿ ದೇವ-ಕಾಮವೇ ಕಾಮದೇವನಾಗಿ" 'ಳ'

ಎಂದು ಅನಾದಿ ಕಾಮದ ಕ್ರಮ ಕವನದಲ್ಲಿ ಏಕವಾಗಿದ್ದ ಬ್ರಹ್ಮವು ಅನೇಕವಾಗಲು ಸಂಕಲ್ಪಿಸಿದ್ದೇ ಸೃಷ್ಟಿಗೆ ಕಾರಣವಾಯಿತು. 'ಇಚ್ಛೆ ಕೊನೆಗಾಣಲೆಂದು' ಜೊತೆಯಾದಾಗ ಕಂದನ ಅವತಾರವಾಗಿದೆ. ಸಂತಾನಕ್ಕಾಗಿ ಸೃಷ್ಟಿಯಾದದ್ದು ಈ ಕಾಮ ಆದ್ದರಿಂದಲೇ ಈ ದೇವಕಾಮವೇ ಮುಂದೆ ವಿರಹಾವಸ್ಥೆಯ ಸಂದರ್ಭದಲ್ಲಿ ಸುಪ್ರೇಮವಾಗಿ ಅರಳುತ್ತದೆ.

ಕಾಮ ಹಾಗೂ ರತಿಯರ ಬಲವಂತದ ವಿರಹ, ರತಿಯ ವಿರಹದಲ್ಲಿ ಬೆಂದ ಕಾಮ ಮುಂದೆ ಶಿವನ ನೇತ್ರದಿಂದ ಅನಂಗನಾದ ಬೂದಿಯಾದ ಕಾಮ ಪ್ರದ್ಯುಮ್ನನಾಗಿ-ಶಿಶು ಪ್ರದ್ಯುಮ್ನ ಸಿಕ್ಕು ತನ್ನ ಪೂರ್ವಜನ್ಮದ ಪತ್ನಿಯ ವಾತ್ಸಲ್ಯದಲ್ಲಿ ಬೆಳೆಯುತ್ತಾನೆ.

"ತನ್ನ ಕಿಚ್ಚನೊಳೆ ಬೆಂಕಿ ಸುಟ್ಟು ಬೆಳಕಾಗಿ ಮಿಂಚಬಹುದು"

ಕಾಮವು ವಿರಹಾಗ್ನಿಯಲ್ಲಿ ಬೆಂದು ಬೆಳಕಾಗುವ ಕ್ರಿಯೆ-ಪ್ರೇಮವಾಗುವ ಕ್ರೀಯೆ ಅಲ್ಲಿದೆ.

"ಮೂಲ ಕಾಮದಲ್ಲಿ ವಿರಹ ಬೆಲೆದು ಸುಪ್ರೇಮವರಳಬಹುದು' ಕಾಮ ತನ್ನ ಸಿಟ್ಟಿನಿಂದ ಬೇರೆಯವರನ್ನು ಸುಡುವ ಬದಲು ತನ್ನನೇ ತಾನು ಸುಟ್ಟುಕೊಂಡಾಗ ಲೋಕಕ್ಕೆ ಬೆಳಕಾಗುವ ಸಾಧ್ಯತೆ ಇದೆ. ಈ ಸುಡುವಿಕೆಯಿಂದ ಸುಪ್ರೇಮ-ವಾತ್ಸಲ್ಯ ಸೃಷ್ಟಿಯಾಗುತ್ತದೆ.

'ಅನ್ನ ಪ್ರಾಣಗಳ ಮಿಥುನದಂತೆ ಮೈ ಎರಡು ಕಲೆತು ಬೆರೆತು
ಮನದ ಕಾವಿನಲಿ ಕಾಮವಾಗಿ ಮನದಾಚೆಗೇನೂ ಅರಿತು
ಚಿತ್ತದಲ್ಲಿ ನಿಷ್ಕಾಮರತಿಯ ರಸಪಾಕವಾಗಿ ನಿಂತು
ಧಾರೆಗೆಡೆದೆ ಭಗವಂತನಲ್ಲಿ ಚಿರಭಕ್ತಿಯಾಗಿ ನಿಂತು'

ಮೈ ಎರಡು ಕಲೆತು ಬೆರೆತ ಕಾಮ ಮತ್ತೆ ಇರುವುದನ್ನು ಅರ್ಥೈಸಿಕೊಳ್ಳುವುದರಿಂದ ಮುಂದೆ ಅದೇ ಅಖಂಡ ಭಕ್ತಿಯಾಗಿ ಪರಿವರ್ತಿತವಾಗುತ್ತದೆ. ಕವಿ ಶಾರೀರಿಕ ಬಯಕೆಗಳು ಮಾನಸಿಕ ಮಟ್ಟಕ್ಕೆ ಏರುತ್ತವೆ, ಕಾಮ ಶರೀರದ ಆಸೆಯಾದರೆ ಪ್ರೇಮ ಮನಸ್ಸಿನ ಆಸೆ ಎನ್ನುತ್ತಾರೆ. 'ಭಿನ್ನ ಜೀವದಲಿ ಏಕೆ ಜೀವ ಕಾಣುವುದು' ಕಾಮದ ವೈಶಿಷ್ಟ್ಯ. ಈ ಕಾಮತೃಪ್ತಿಯೇ ಭಾವದೀಪ್ತಿಯಾಗಿ ಜೀವ ತೆಗೆಸುತ್ತದೆ. ಕಾಮಭಾವ ವಿರಹಭಾವದಿಂದ ನೊಂದು ಬೆಂದು ಪ್ರೇಮ ಭಾವವಾಗುವ ದಾಂಪತ್ಯ ಗೀತ ಕನ್ನಡ ಮೇಘ ದೂತದ ತಿರುಳು.

ಕವಿ ಈ ವಿರಹ ದುರಿಯ ಕಾಮವನ್ನು ಭೂತಾಯಿಯ ಸೃಷ್ಟಿಯ ಪ್ರಕ್ರಿಯೆಗೂ ಅನ್ವಯಿಸುತ್ತಾರೆ.

ಮಣ್ಣು-ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ
ವಿರಹ ಬವಣೆಯಲಿ ತಿರುಗಿ ತಿರುಗುವಳು ಹೊತ್ತು ಸುತ್ತಿನಿಂದ
ಕಣ್ಣ ನೀರು ಕಡಲಾಗಿ ಕಾದು ಉಗಿಯಾಗಿ, ಮೋಡವಾಗಿ
ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ. 'ೞ'

ಮಣ್ಣು-ಹೆಣ್ಣು ತನ್ನೊಡೆಯನಾದ ಬಾನಿನಿಂದ ವಿರಹ ಪೀಡಿತೆಯಾಗಿ ಕಣ್ಣೀರ ಸುರಿಸಿ, ಕಣ್ಣೀರೆ ಕಡಲಾಗಿ, ಕಡಲು ಕಾದು ಆವಿಯಾಗಿ, ಮೋಹವಾಗಿ ಬಾನೆದೆಯಿಂದ, ಭೂ ಹೆಣ್ಣಿನೆದೆಗೆ ಸಿಂಚನವಾದಾಗ ಹಚ್ಚ ಹಸಿರ ಸೃಷ್ಟಿಯಲ್ಲಿ ತನ್ಮಯಳಾಗುತ್ತಾಳೆ. ಭೂಮಿಯ ಕಾಮವೂ ಸೃಷ್ಟಿ ಶಕ್ತಿಯ ಮೂಲದಲ್ಲಿದೆ ಎನ್ನುವ ಕವಿ ಈ ಭಾವವನ್ನೇ ಯಕ್ಷ-ಯಕ್ಷಿಯರ ಕಥೆಗೆ ಅನ್ವಯಿಸುತ್ತಾರೆ. ಕವಿ ಕಾಮ ವಿಕಾಸದ ಪೌರಾಣಿಕ ಸಂಕೇತವನ್ನು ಇಲ್ಲಿ ಚಿತ್ರಿಸಿದ್ದಾರೆ.

ಯಕ್ಷನೊಬ್ಬ ತನ್ನೊಡೆಯನ ಕಾರಣದಿಂದ ನಲ್ಲೆಯಿಂದ ದೂರವಾಗಿ ನಿಂತು ಕೊರಳ ಗೆಳತಿಯನ್ನು ನೆನಪಿಸಿಕೊಳ್ಳುವ, ದೂತನಾದ ಮೇಘಕ್ಕೆ ಸಖಿಯ ವಿವರ ಕೊಡುವ ಬಗೆ ಅದ್ಭುತವಾಗಿ 'ಕನ್ನಡ ಮೇಘ ದೂತ'ದಲ್ಲಿ ಮೂಡಿ ಬಂದಿದೆ. ಕಾಳಿದಾಸನ ಸಂಸ್ಕೃತ ಮೇಘ ದೂತ ಬೇಂದ್ರೆ ಕೈಯಲ್ಲಿ ದೇಸಿ ಚೆಲುವಿಂದ ಪುನರ್ ಸೃಷ್ಟಿಯಾಗಿದೆ.

ಶ್ರಾವಣದ ಸಮೃದ್ಧ ಸ್ಥಿತಿಯಲ್ಲಿ ನಲ್ಲೆ-ನಲ್ಲನಿಲ್ಲದೆ ವಿರಹದುರಿಯಲ್ಲಿ ಜೀವ ಉಳಿಸಿಕೊಳ್ಳುವಳೋ ಇಲ್ಲವೋ ಎಂಬ ಕಾತರದಿಂದ ಗಾಳಿ-ನೀರು-ಧಗೆ-ಬೆಂಕಿಯೊಡಗೂಡಿ ಆಗಿರುವ ಮೇಘವನ್ನು ದೂತನನ್ನಾಗಿಸಿಕೊಳ್ಳುತ್ತಾನೆ. ನನ್ನ ಇನಿಯಳೆಡೆಗೆ ಓತು ಓಯ್ಯೋ ಅಗಲಿದವರ ಮಾತ ನಿನ್ನತ್ತಿಗೆಗೆ ಎಂಬ ಸಂಬಂಧ ಬೆಳಸುತ್ತಾನೆ. ನಲ್ಲೆಯ ಭೇಟಿಗಾಗಿ ಸಾಗುವ ದಾರಿಯಲ್ಲಿ ಮೇಘರಾಜ ಕಾಣುವ ವೇತ್ರಾವತಿ, ಗಿರಿಬೆಟ್ಟಗಳು, ಕಾಡು, ಹೊಳೆ, ತೋಟ, ಹೂವು, ಹಣ್ಣು- ಹೆಣ್ಣುಗಳ ಬಗೆಯನ್ನು ವರ್ಣಿಸುತ್ತಾನೆ. ಸೊರಗಿದ ನಿರ್ವಿಂದ್ಯೆ 'ನಿನ್ನಿಂದ ಅಗಲಿ ತಾ ಸೊರಗಿ ಸಣ್ಣಗಿಹಳು ದೈವದಿಂದ ನಿನ್ನನ್ನು ಸೇರಿ ಮೈದುಂಬಿಕೊಳ್ಳಬಹುಳು' ಎಂದು ಮೇಘ ಪುರುಷನಿಗೆ ಕಾದು ನಿಂತ ಜಲವೆಣ್ಣನ್ನು ನೆನೆಪಿಸುತ್ತಾನೆ. ಪ್ರಕೃತಿ-ಪುರುಷರ ಕಲೆಯುವಿಕೆ ನಿಸರ್ಗದ ಅನಿವಾರ್ಯತೆ ಎನ್ನುತ್ತಾನೆ. ಉಜ್ಜಯಿನಿಯ ರಮಣರು ಕಳ್ಳತನದಲ್ಲಿ ರಮಣೀಯರನ್ನು ಸೇರಲು ಹೊರಟಾಗ, ಕಗ್ಗತ್ತಲಿನ ರಾಜಬೀದಿಯಲ್ಲಿ ಮಿಂಚು ಚೆಲ್ಲಿ ಅವರನ್ನು ಕಂಗೆಡಿಸ ಬೇಡ ಎಂದು ಪ್ರೇಮಿಗಳ

ಸೇರುವಿಕೆಗಾಗಿ ಅನುವು ಮಾಡಿಕೊಡುತ್ತಾನೆ.

ಒಂಟಿಯಾಗಿ ಇರುಳುದ್ದ ಕಳೆದ ಸತಿಗಾಗಿ ರವಿಯು ಬಹನು
ಸಾವಿರಾರು ಕರ ಚಾಚಿ ಕಮಲೆಯರ ಕಣ್ಣನೊರಿಸಲಿಹನು
ತನ್ನ ಹೆಂಡಿರನು ತಾನೆ ತವಿಸದಿನ್ನಾರು ಶಮಿಸಲಹುದು
ಅಡ್ಡ ನೀನು ಇರಬೇಡ ಕವಿಗೆ ಅವ ಕೆಂಡವಾಗಬಹುದು. '೬'

ನಲ್ಲ-ನಲ್ಲೆಯರ ಅಗಲಿಕೆಯ ತಾಪ ಸ್ವತಃ ಯಕ್ಷನನ್ನು ಸುಡುತ್ತಿರುವುದರಿಂದ ಸೂರ್ಯ ಹಾಗೂ ಕಮಲಗಳ ವಿರಹ ತಾಪದ ಬಗ್ಗೆ ಕನ್ನಡ ಪೂರ್ವ ಮೇಘಧೂತ ಕವನದಲ್ಲಿ ಮರುಕವಿದೆ. ತನ್ನಂತೆ ವಿರಹದ ಬೇಗೆ ಇನ್ನಯಾರನ್ನೂ ಸುಡದಿರಲೆಂದು ಹಾರೈಕೆ ಇದೆ. ಯಕ್ಷರಾಜ ಮುಂದೆ ಸಾಗುವ ಮೋಡರಾಜನಿಗೂ ಭೂ ತಾಯ ಮಡಿಲಲ್ಲಿ ಹರಿಯುತ್ತಿರುವ 'ನೀರೆ' ಗಂಭೀರೆಗೂ ಜೋಡಿ ಮಾಡುತ್ತಾನೆ. ಒಯ್ಯೋ ನಿನ್ನ ಜೊತೆಗಿರಲಿ ಮೇಘವೇ ಪಯಣ ಬೆಳಸುವಾಗ ಉಂಡು ಒಮ್ಮೆ ಬಿಡಬಹುದದಾರು ಬರಿ ಬಚ್ಚ ಚೆಲುವು ಭೋ ಎಂದು ಒಂಟಿಯಾಗಿ ಸಾಗುತ್ತಿರುವ ಮೇಘರಾಜನಿಗೆ ರಮಿಸುತ್ತಾನೆ.

ಅಲಕಾನಗರಿಯಲ್ಲಿ ಮಿಂಚಿನಂತಹ ಎಳೆವೆಂಡಿರು ಸಿಂಗರಿಸಿಕೊಂಡು ತಮ್ಮ ನಲ್ಲಂದಿರ ತೋಳುಗಳಲ್ಲಿ ಮೈಮರೆತಿರುತ್ತಾರೆ. ಯಕ್ಷರು ತಮ್ಮ ಕಾಮ ಕೇಳಿಯ ಪುಷ್ಟತೆಗಾಗಿ ತಾಳೆ ಹಾಲನ್ನು ಕುಡಿಯುತ್ತಾರಂತೆ! ಕಾಮಿ ಜನರ- ಅಮರ ಗಣಿಕೆಯರ ಸರಸಾಽಲಾಪವನ್ನು ಕವಿ ಮೇಘರಾಜನಿಗೆ ಉಸುರುತ್ತಾನೆ.

'ನೂಲು ಹರಿದು ಎದೆಯುಜ್ಜಿ ಜರಿದು ಸರ ಮುತ್ತುತೊಳಗುತಾವ
ಮತ್ತ ಕಾಮಿಗಳ ಇರಳ ಹಾದಿಯನು ಬೆಳಗು ಬೆಳಗುತಾವ. '೭'

ಅಲಕಾನಗರಿಯ ಕಾಮುಕದಾಟದ ಪರಿಯು ಈ ವಿವರಗಳಲ್ಲಿವೆ ಮುಂದುವರದು ಹೋದರೆ ಇಂದ್ರಚಾಪದ ತೋರಣದಿಂದ ಮೆರೆಯುತ್ತಿರುವ ಎತ್ತರದ ಮನೆ ಕಾಣುತ್ತದೆ. ಅದೇ ನಮ್ಮ ಮನೆ ಮನೆಯ ಪಕ್ಕದಲ್ಲಿ.

ನನ್ನಾಕೆ ನೀರನುಣಿಸಿರುವ ಕಂದನಾಗಿ
ಕೈಯತ್ತರಾದ ಮಂದಾರವೊಂದು ಇದೆ ಗೊಂಚಲಾಗಿ ಬಾಗಿ. '೮'

ಮನೆ-ಮನೆಯೊಡತಿಯ ಕಾಳಜಿಯಲ್ಲಿ ಬೆಳೆದ ಹೂಗಿಡ ಈ ಎಲ್ಲ ಚಿತ್ರಗಳು ನೆನಪಿನ ಭಿತ್ತಿಯಲ್ಲಿ ಅರಳುತ್ತವೆ. ಮೇಘರಾಜನ ಮಿಂಚಿನ ಮೋಡಿಯನ್ನು ನೋಡಿದಾಗ ಯಕ್ಷರಾಜನಿಗೆ ತನ್ನ ಅಗಲಿದ ಯಕ್ಷಯ ಕಣ್ಣಿನ ಮೊಡಿ ನೆನಪಾಗುತ್ತಿದೆಯಂತೆ. ಮಿಂಚುಗಣ್ಣಿನ ನಲ್ಲೆಯು ಬಂಗಾರ ಕೋಲಿನಲ್ಲಿ, ಕೈಬಳೆಯ ತಾಕಲಾಟದಲ್ಲಿ ನವಿಲನ್ನು ಕುಣಿಸುವ ಮಾಟ ಯಕ್ಷನ ಚಿತ್ತ ಭಿತ್ತಿಯಲ್ಲಿ ನೆಲೆಯಾಗಿವೆ. ನಲ್ಲನಿಲ್ಲದ ಮನೆಯನ್ನು ಶೃಂಗರಿಸಲು ಅನ್ಯಮನಸ್ಕಳಾಗಿದ್ದಾಳೆ. ಯಕ್ಷ ತನ್ನನಗಲಿದ ನಲ್ಲೆ ತಮ್ಮ ಮನೆಯನ್ನು ಹೇಗೆ ಇರಿಸಿದ್ದಿರಬಹುದೆಂದು ಊಹಿಸುತ್ತಾನೆ. ವಿರಹತಾಪದಿಂದ ಬೆಂದು ನೊಂದಿರುವ ನಲ್ಲೆಯ ಕುರಿತ ಕಾಳಜಿ ಇಲ್ಲಿ ವ್ಯಕ್ತವಾಗಿದೆ.

ಸೂರ್ಯನಂತಹ ನಲ್ಲ ಮನೆಯಲ್ಲಿದ್ದರೆ ಮನೆಗೆಲಸದ ಆಸಕ್ತಿ ನಲ್ಲೆಗೆ ಸಹಜವಾಗಿ ಇರುತ್ತದೆ. ಅಂತಹ ತನ್ನ ನಲ್ಲೆಯ ಚೆಲುವಿನ ಮಾಟವನ್ನು ನಲ್ಲನ ನುಡಿಯಲ್ಲೇ ಕೇಳಬೇಕು.

ಬಳ್ಳಿ ಮೈಯು ಪನೆಹಲ್ಲು ಕೆಂಪು ತುಟಿ ಹಣ್ಣು ತೊಂಡೆಯಂತೆ
ಸಣ್ಣ ನಡುವು ಚೆಲು

ಹುಲ್ಲೆಗಣ್ಣು ಕುಳಿನಾಭಿ ಸುಳಿಗಳಂತೆ
ತುಂಬು ಎದೆಗೆ ನಸುಬಾಗಿ ಹರಿವು ಹಿಮ್ಮೈಗೆ ಮಂದವಾಗಿ
ಎಲ್ಲ ಹೆಣ್ಣನೊಳೆ ಬ್ರಹ್ಮಕೃತಿಗೆ ಹೊಸ ಹೊಚ್ಚ ಚೊಚ್ಚಿಲಾಗಿ. '೯'

ಪರಪುರುಷನಾದ ಮೇಘರಾಜನಿಗೆ ಯಕ್ಷ ತನ್ನ ನಲ್ಲೆಯ ಮೈಚೆಲುವನ್ನು ಮೈ ಮರೆತು ಬಣ್ಣಿಸುತ್ತಿದ್ದಾನೆ. 'ಬ್ರಹ್ಮ ಕೃತಿಗೆ ಹೊಸ ಹೊಚ್ಚ ಚೊಚ್ಚಿಲು' ಎನ್ನುವಲ್ಲಿನ ಅಭಿಮಾನ ಗಮನಾರ್ಹ. ಸದಾ ಜೋಡಿ ಚಕ್ರ ವಾಕಗಳಂತೆ ಇರುತ್ತಿದ್ದ ನಲ್ಲ-ನಲ್ಲೆಯರು ಇದೀಗ ಚಕ್ರವಾಕೆಯೊಂದರಂತೆ, 'ಚಳಿಕುಳಿರ ನೋಂಕುತಾಗಿ' ದಂತೆ ಪರಿತಪಿಸುತ್ತಿದ್ದಾಳೆ. ತನ್ನನಗಲಿದ ನಲ್ಲೆ ಅದೆಷ್ಟು ದೈನ್ಯಾವಸ್ಥೆಯಲ್ಲಿದ್ದಿರಬಹುದು ಎಂದು ಊಹಿಸುತ್ತಿದ್ದಾನೆ.

ಅತ್ತು ಅತ್ತು ಮತ್ತತ್ತು ಕೆದರಿಕೊಂಡಿಹುದು ಕಣ್ಣ ಪೊಗರು
ಬೆಚ್ಚನುಸಿರನುಂಡುಂಡು ಸೊಪ್ಪೆಯಾಗಿಹುದು ತುಟಿಯ ಚಿಗುರು
ಗಲ್ಲದಲ್ಲಿ ಕೈ ಓರೆಮೋರೆ ನಿಡಿಗೂದಲುದ್ದ ಚಿಂತೆ
ಮೋಡ ಮುಸುಕಲಿರೆ ಮಂಕುಗವಿದ ಆ ದೀನ ಚಂದ್ರನಂತೆ. '೧೦'

ಅಷ್ಟೇ ಅಲ್ಲ ಆಚಾರದಲ್ಲಿ ತನ್ನನ್ನು ತೊಡಗಿಸಿಕೊಂಡವಳು, ಅಗಲಿರುವ ತನ್ನ ನಲ್ಲನ ಪ್ರೀತಿಯ ಸವಿಯನ್ನುಂಡು ನಲಿಯುತ್ತಿದ್ದ ಸಾಕು ಸಾರಿಕೆಯನ್ನು ನಿನಗೆ ಅವನ ನೆನಪಾಗುತ್ತಿಲ್ಲವೆ ಎಂದು ಪ್ರಶ್ನಿಸುತ್ತಿದ್ದಾಳೆ.

'ಹೇಳೇ ಜೇನೆ
ಅವರ ಮುದ್ದು ನೀ, ನಮ್ಮ ಒಡೆಯರನು ಒಮ್ಮೆ ನೆನಯುವೆಯೇನೆ?

ರಾಮಗಿರಿಯಲ್ಲಿ ನಿಂದು ಅಲಕಾನಗರದಲ್ಲಿ ಕೊರಗುತ್ತಿರುವ ನಲ್ಲೆಯನ್ನು, ಅವಳ ಚೆಲುವು-ಒಲವುಗಳನ್ನು ತಾನು ನೆನೆದಂತೆ ನಲ್ಲೆಯೂ ತನ್ನ ನೆನಪಿನಲ್ಲಿ ಕೊರಗುತ್ತಿರಬಹುದೆಂದೂ, ಅವಳ ನಿತ್ಯ ಕ್ರಮಗಳ ಬಗ್ಗೆ ಹೀಗಿದ್ದಿರಬಹುದೆಂದೂ ಮೇಘರಾಜನಿಗೆ ವಿವರಿಸುತ್ತಿದ್ದಾನೆ. ನಲ್ಲನ ಕುರಿತು 'ಪದಕಟ್ಟಿ ಹೇಳಲೆಳಿಸಿ' ಹೇಳಲಾಗದೆ ಕಂಬನಿ ಸುರಿಸುತ್ತಿರುತ್ತಾಳೆ. ಮಾಸು ಬಟ್ಟೆಯ ತೊಟ್ಟ ನಲ್ಲೆ, ವೀಣೆಯನ್ನು ತೊಡೆಯಲ್ಲಿರಿಸಿಕೊಂಡು ಕೊರಗುತಿಹಳು. ಅವಳೇ ನನ್ನ ನಲ್ಲೆ ಎಂದು ಅವಳ ಚಹರೆಗಳನ್ನು ಮೇಘರಾಜನಿಗೆ ನೀಡುತ್ತಾನೆ.

ಅಗಲಿದ ದಿನವೆಷ್ಟೋ, ಉಳಿದ ದಿನವೆಷ್ಟೋ ಎಂದು 'ಹೊಸ್ತಿಲಕ್ಕೆ ಹೂವಿಟ್ಟು ನೋಡುತ್ತಾಳಂತೆ ! ಯಕ್ಷಿ! ನಲ್ಲನೊಡನೆ ಕಳೆದ ರಸಿಕ ಕ್ಷಣಗಳನ್ನು ನೆನೆದುಕೊಂಡು ಸುಖಿಸುವ ಯಕ್ಷಿಯನ್ನು ಯಕ್ಷ ಹೀಗಿರಬಹುದೇ ಎಂದು ಊಹಿಸುತ್ತಾನೆ.

ಇಲ್ಲ ಎದೆಯ ಮುಟ್ಟಿಳಿದ ಮೊದಲ ಸಂಗಗಳ ಸವಿವಳೇನೋ
ನಲ್ಲರಗಲೆ ನಲ್ಲೆಯರಿಗೆಲ್ಲಾ ಇವು ಆಟ ಇಷ್ಟೆ ತಾನೋ? '೧೧'

ಯಕ್ಷ ತಾನೂ ಹಾಗೂ ತನ್ನ ನಲ್ಲೆ ನಡೆಸಿದ ಸರಸ-ಸಲ್ಲಾಪಗಳ ಕುರಿತು ನೆನಪ ಸವಿದಲ್ಲಿ ಇರುವಳೇನೋ. ಪ್ರತಿ ಜೀವಕ್ಕೂ ಆ ಸವಿ ನೆನಪೇ ಏಕಾಂಗಿತನದಲ್ಲಿ ಹುಮ್ಮಸ್ಸು ನೀಡುತ್ತದೆ. ಆದರೆ ಹಗಲು ಹೊತ್ತಿನಲ್ಲಿ ಮನೆಗೆಲಸದಲ್ಲಿ ಕಾಲ ಕಳೆಯುವ ಹೆಣ್ಣು ರಾತ್ರಿಯ ಹೊತ್ತಿನಲ್ಲಿ ಹೇಗಿರುವಳೋ ಏನೋ ಎಂದು ಚಿಂತಿಸುತ್ತಾನೆ.

'ಇರುಳು ಅವಳ ಗತಿಯೇನೋ ? ಅಳುವುದೋ ?

ಸಾಧ್ವಿ ನೆಲದೊಳೇ ನಿದ್ದೆಯಿಲ್ಲದೇ ನರಳುತ್ತಾಳೆ ವಿರಹಿತರ ಪಾಲಿಗೆ ಇದು ಶಾಪವೇ ಹೌದು ! ನಲ್ಲನ

ಪ್ರೀತಿ' ಇರುಳ ಬೇಟದ ನೆನಪು'

'ಇಂಪುಗರೆವ ಇಂದುವಿನ ಕಿರಣ'ಗಳು ಅಂದಿನ ಬಿಸಿಯುಸಿರಿಯತ್ತು ಮುಗೀದೀತೆ ಎನುವೋಲಾಯ್ತು' ಎನ್ನುತ್ತಾನೆ.

ನಿಟ್ಟುಸಿರ ಬಿಸಿಯಿಂದ ಒಣಗಿದ ತುಟಿ ಚಿಗುರು, ಎಣ್ಣೆ ಕಾಣದ ಒಪ್ಪವಳಿದ ಮುಂಗುರುಳು, ಕಣ್ಣಕಂಬನಿಯಲ್ಲೇ ದಾಹವಿಂಗಿಸಿಕೊಳ್ಳುವ ಪರಿಯಲ್ಲಿ ನಿದ್ದೆ ಬಂದು ಕನಸಲ್ಲಾದರೂ 'ಸೇರೇನೆ ವೆನ್ನನೆಂದು' ಹಂಬಲಿಸಿರುತ್ತಾಳೆ. ಅಂದು ಆ ದಿನದ ನನ್ನ ಅಗಲಿಕೊಯಲ್ಲಿ ಬಿಚ್ಚಿದ್ದ ಹೆಳಲು ನಲ್ಲನ ಬರವಿನಂದು ಮುಡಿದೇನು ಎಂದು ಕಾದಿರುವಳು. ಆಭರಣವೆನ್ನೂಲ್ಲದೆ ಹೆಣದಂತೆ ಇರುವ, ಹೊರಳುತ್ತಾ-ನರಳುವ ಅವಳ ಸ್ಮೃತಿ ನಿನ್ನ ಕಣ್ಣಲ್ಲು ನೀರಹನಿಸುತ್ತದೆ ಎನ್ನುತ್ತಾನೆ.

'ಕರುಳುಯಿದ್ದ ಎದೆಗಾರರಾರಿದಕೆ ಕರಗದಿರುವರಣ್ಣ? ಎಂದು ವಿರಹ ಪೀಡಿತ ಯಕ್ಷ ಹಳಹಳಿಸುತ್ತಾನೆ. ಅವಳ ಅಗಲಿಕೆಯ ನೋವು 'ನಾನು ಕಾಮ' ಲೋಕೈಕ ಪತಿಯು ಎನುವಂತೆ ವಾಚಾಳಿಯಂತೆ ಬಣ್ಣಿಸಿದೆ. ನಾನು ಬಣ್ಣಿಸಿದ ರೀತಿಯನ್ನು ನಿನ್ನ ಅತ್ತಿಗೆಗಿಷ್ಟು ಹೇಳು ಎಂದು ಅಂಗಲಾಚುತ್ತಾನೆ. ನಾನಿಲ್ಲದ ಗಳಿಗೆಯಲ್ಲಿ 'ಬರಿ ಬಾನ ತುಂಬೆ ನೀನೋ 'ಅಬ್ಬರಿಸಿದರೆ ಬೆಚ್ಚಿ ಬಿದ್ದಾಳು' ಅವಳ ಹೊಂಬಾಳೆದಿಂಡುದೊಡ ಅದಿರೆ ನಾನು ಬಳಿಗೆ ಇಲ್ಲ' ಆದ್ದರಿಂದ ನಿನ್ನ ಗುಡುಗು ಮಿಂಚುಗಳ ಆರ್ಭಟ ಬೀಡ.

ನೀನು ಹೋದ ಆ ಹೊತ್ತೆ ನಿದ್ದೆ ಚಿತ್ತೈಸೆ ಅವಳ ನೋಡಾ
ಮೇಘರಾಜ ದಯೆ ಮಾಡಿ ತಡೆಯಾ ಹುಸಿ ಗುಡುಗ ಹಾಕ ಬೇಡಾ
ಹೇಗೋ ಕನಸಿನಲಿ ಸೇರಿ ನನ್ನ ಮುಗಿ ಬಿದ್ದು ಕೊರಳ ಹುಚ್ಚಿ
ಎದ್ದಾಳೊ ಬಾಲೆ ಬಿದ್ದಾಳೊ ಬೆದರಿ ಕೈ ಮಲಕು ಬಿಚ್ಚಿ ಬಿಚ್ಚಿ

ಆಗಿನ್ನೂ ನಿದ್ರಿಸಿ ಕನಸಲ್ಲಾದರೂ ನಲ್ಲನ ಕೊರಳಿಗೆ ಆತುಕೊಳ್ಳುವ ಬಾಲೆಗೆ ನಿನ್ನಿಂದ ತೊಂದರೆಯಾಗದಿರಲಿ ಎಂದು ಬೇಡಿಕೊಳ್ಳುತ್ತಾನೆ. ತುಂತರ ನೀರ ಹನಿಗಳು ಅವಳಲ್ಲಿ ಮುದತರಿಸಿ-ಎಚ್ಚರಿಸಿದಾಗ ಹಿಗ್ಗಣ್ಣಿನವಳೊಂದಿಗೆ ನಸು ಗುಡುಗು ಬೆಡಗಿನೊಂದಿಗೆ ಗಂಭೀರವಾಗಿ ಮಾತನಾಡು ಎಂದು ವಿನಂತಿಸಿಕೊಳ್ಳುತ್ತಾನೆ. ನಾನು ನಿನ್ನ ನಲ್ಲನ ಸಂಗಾತಿಯೆಂದು ಅವಳಲ್ಲಿ ಪರಿಚಯಿಸಿಕೋ. ನಿನ್ನನ್ನು ಅಗಲಿದ ಯಕ್ಷ ದೂರದ ರಾಮಗಿರಿಯಲ್ಲಿ ನೆಮ್ಮದಿಯಾಗಿಲ್ಲ. ನಿನ್ನಂತೆ ಅವನೂಕೂಡ ವಿರಹದುರಿಯಲ್ಲಿ ನೋಯುತ್ತಿದ್ದಾನೆಂದು ತಿಳಿಸು 'ಒಳ್ಳಿತೇನೇ ಅಬಲೇ' ಎಂದು ಮೊದಲಿಗೆ ಕೇಳು. ಕಷ್ಟದ ಸಂದರ್ಭಕ್ಕೆ ಇಂತಹ ಕ್ಷೇಮಭಾವದ ಪ್ರಶ್ನೆ ಸುಖನೀಡುತ್ತದೆ. ನಿನ್ನ ಆತ್ಮೀಯತೆ ಅವಳಿಗಿಷ್ಟು ಸುಖವನ್ನು ನೀಡಲಿ ಎಂದು ಕೇಳಿಕೊಳ್ಳುತ್ತಾನೆ. ಶಾಪದಿಂದ ಜೀವಗಳೆರೆಡು ದೂರಾಗಿದ್ದರೂ 'ಭಾವದಿಂದ ಒಡಗೂಡಿ ಬಯಸಿದೆನೆ ನನ್ನ ಭಾವಿ ರಾಣಿ' ಎಂದು ನನ್ನ ಹಂಬಲ ತಿಳಿಸು ಎನ್ನುತ್ತಾನೆ.

ರಾಮಗಿರಿಯ ತಪ್ಪಲಿನ ಬಳ್ಳಿಯ ಬಳುಕಿನಲ್ಲಿ ಸಖಿಯ ಮೈಯನ್ನು, ಹುಲ್ಲೆಯ ಬೆದರುಗಣ್ಣಿನಲಿ ಅವಳ ಹಿಗ್ಗಿನ ಕಣ್ಣು, ಚಂದ್ರನ ಸೊಗಸಲ್ಲಿ ನಿನ್ನ ಮೊಗವನ್ನು, ನದಿಯ ಮೊರೆತದಲ್ಲಿ ನಿನ್ನ ಹುಬ್ಬನ್ನು ಸದೃಶಗೊಳಿಸಿ ನೋಡುತ್ತಿರುವ ನನ್ನ ಪ್ರೇಮ ತಾಪವನ್ನು ಅವಳಲ್ಲಿ ವಿನಂತಿಸಿಕೋ ಅವಳ ಚಿತ್ರವನ್ನು ಬರೆದು ಕಣ್ಣಿಗೆ ತುಂಬಿಕೊಳ್ಳೋಣ ಎಂದು ಪ್ರಯತ್ನಿಸಿದರೆ ನಲ್ಲೆಯ ನೆನಪಿನಿಂದಾಗಿ ಕಣ್ತುಂಬಿ ಬಂದು. ಚಿತ್ರದಲ್ಲಿ ಕೂಡುವುದು ಕ್ರೂರ ಈ ವಿಧಿಗೆ ಸೇರಲಿಲ್ಲ' ಎಂಬ ಗೋಳನ್ನು ಅವಳಿಗೆ ತಿಳಿಸಿ ಹೇಳು ಎನ್ನುತ್ತಾನೆ.

ನಲ್ಲೆಯ ಕನವರಿಕೆ ಇಷ್ಟಕ್ಕೆ ಮುಗಿಯುವುದಿಲ್ಲ. ಕಣ್ಮುಂದೆ ಬಂದು ನಿಲ್ಲುವ ನಲ್ಲೆಯ ರೂಪಕ್ಕೆ ಭ್ರಮಿತನಾಗಿ ಬಯಲಿನಲಿ ತೋಳ್ದೆರೆದು ಅಪ್ಪಿಕೊಳ್ಳುವ ಸ್ಥಿತಿಯನ್ನು ಕಂಡು ವನದೇವತೆಗಳೂ ಕಂಬನಿಗರೆಯುತ್ತಿದ್ದಾರೆ. ವಿರಹ ತಾಪದಲ್ಲಿ ಬಸವಳಿದ ನಲ್ಲ, 'ಸುಗುಣೆ ನಿನ್ನ ಮೈಮುಟ್ಟಿ ಬಂದಿತೋ, ಏನೋ ಎಂದು ನಾನು ಆ ಹಿಮಾದ್ರಿವಾತವನ ಇಲ್ಲಿ ಉಬ್ಬುಬ್ಬಿ ತಬ್ಬುತಿಹನು' ಎಂದಿದ್ದಾರೆ. ಹಿಂದೊಮ್ಮೆ ನಲ್ಲನ ತೋಳದಿಂಬಿನಲ್ಲಿ ಹೊರಳಿ ಅಳುತ್ತಾ ಎದ್ದಾಗ ಕಾರಣ ಕೇಳಿದ ನಲ್ಲನಿಗೆ ಕಂಡೆ ಕನಸಿನಲಿ, ಕಳ್ಳ ನೀನು ಯಾವಳನೋ ಕೂಡಿದಂತೆ' ಎಂದು ನಕ್ಕ ನೆನಪಿಂದ ನಲ್ಲೆಗೆ ಸಾಂತ್ವನ ಮಾತನ್ನು ಕಳುಹಿಸಿದ್ದಾನೆ.

ನಿನ್ನ ವಿರಹ ವ್ಯಥೆಯಿಂದ ಬೆಂದು ಬದುಕಿಹೆನು ಹೇಗೋ ಇಂದು
ಆದರೂನೂ ಹಿಡಿದಿರುವೆ ಜೀವ ಏನೇನೋ ಲೆಕ್ಕ ಹಾಕಿ
ಸುಭಗೆ ಅಂಜಿ ಸಾಯಬೇಡ ಕಳೆ ಕಾಲ ಹೇಗೋ ನೂಕಿ
ಯಾರು ಬರಿಯ ಸುಖ ಬರಿಯದುಃಖ ಪಟ್ಟವರು ಲೋಕದಲ್ಲಿ
ದೆಸೆಯು ಕೆಳಗೆ ಮೇಲಾಗಿ ತಿರುಗುವುದು ಏಕ ಚಕ್ರದಲ್ಲಿ '೧೩'

ಎಂದು ಸಾಂತ್ವನ ಹೇಳುತ್ತಾನೆ.

ಕುಶಲನಿರುವ ನಾನಿಲ್ಲಿ ನಿನ್ನನೇ ನೆನೆದು ಧೈರ್ಯತಾಳಿ
ನೀನು ಕೂಡ ಎದೆಗೆಡಿಸಿಕೊಳ್ಳದಿರು ಏನೋ ಸುದ್ದಿ ಕೇಳಿ
ಅಗಲಿದಾಗ ತಿನ್ನುವುದು ಸ್ನೇಹವೆನ್ನುವುದು ಜೀವವನ್ನು
ಕೂಡಿದೊಡನೆ ಅದೆ ಸೂರೆ ಮಾಡುವುದು ಪ್ರೇಮ ಭಾವವನ್ನು '೧೪'

ಇರುಳು ಕಳೆಯಲು ಕಷ್ಟವಾಗುತಿದೆ ಎಂದು ನಲ್ಲೆಗಾಗಿ ಹಂಬಲಿಸುವ ಸಖ ವಿರಹದುರಿಯಲ್ಲಿ ಕರಗಿ ಹೋದ ಕಾಮ-ಪ್ರೇಮವಾಗಿ ಅರಳಿಕೊಳ್ಳುವ ಬಗೆಯನ್ನು ತಿಳಿಸಿ 'ಮರಳಿ ಬಂದು ಅವಳೊಸೆಗೆ ತಂದು ನನಗೊಂದು ಬಾಳನೀಡು, ಕಳಚಿ ಬೀಳಲಿಹ ಕುಂದ ಕುಸುಮದೊಲು ಇಹುದು ನನ್ನ ಪಾಡು, ಎನ್ನುವಲ್ಲಿ ಕಾಮ-ಪ್ರೇಮಗಳಲ್ಲಿ ಸಮರಸವಾಗಿ ಬದುಕಿದ ಜೀವದ ಕಾತರತೆ ಕಂಡುಬರುತ್ತದೆ. ಕಾಮದ ಸೆಳೆತವನ್ನು ಮೀರಿದ ಪ್ರೇಮ ವಿರಹದ ಧಗೆಗೆ ಬೆಂದು ಪರಿಪುಷ್ಟಿವಾಗಿದೆ. ಪ್ರೇಮದ ಒಸೆಗೆ ತಲುಪಿಸುವ ಸಖನಿಗೆ ಯಕ್ಷಿ ನನ್ನಂತೆ ನೀನು ನಿನ್ನವಳಿಂದ ದೂರವಿರದೇ ಜೊತೆಗೂಡಿ ಬಾಳು ಎಂದು ಹಾರೈಸುತ್ತಾನೆ.

'ಬೇಡಿ ಕೊಂಬೆ ನಾ ಇರಲಿ ಎಂದಿಗೂ ಮೋಡ ಮಿಂಚುಗೂಡಿ' ಎಂಬ ಮನ ತುಂಬಿದ ಮಾತಿನಲ್ಲಿ ನನ್ನಂತೆ ಉಳಿದ ಪ್ರೇಮಿಗಳಿಗೆ ವಿರಹದ ಶಾಪ-ತಾಪ ತಟ್ಟದಿರಲಿ. ನನ್ನವಳಿಗೆ ಪ್ರೀತಿಯ ಒಸಗ ತಲುಪಿಸುತ್ತಿರುವ ಮೇಘ ರಾಜನಿಗೆ 'ನಿನ್ನ ನಲ್ಲೆ ಮಿಂಚು ಸದಾ ನಿನ್ನೊಡನಿರಲಿ' ಎಂದು ಶುಭ ನನ್ನಿಯನ್ನು ನೀಡುತ್ತಾನೆ.

ಸಂಸ್ಕೃತದ ಕಾಲಿದಾಸನ ಮೇಘದೂತ -ಕನ್ನಡದ ಮೇಘದೂತವಾಗಿದೆ. ಮೂಲ ಕಾಮದ ವಿರಹ ಬೆಳೆದು ಸುಪ್ರೇಮವರೆಳಬಹುದು' ಎಂಬ ಮಾತು ಯಕ್ಷ-ಯಕ್ಷಿಯರ ಸಂದರ್ಭಕ್ಕೆ ನಿಜವಾಗಿದೆ. ಕಾಮ ಸೂತ್ರದ ಆಟ ಪ್ರೇಮ ಪಾಕದಲ್ಲಿ ಪಕ್ವಗೊಳ್ಳುವ ಪರಿ ಕಾವ್ಯದಲ್ಲಿ ಪಡಿ ಮೂಡಿದೆ. ಕವಿ ದಾಂಪತ್ಯದ ಚೌಕಟ್ಟಿನಲ್ಲಿ ಕಾಮವು ಪ್ರೇಮವಾಗಿ ಮಾಗುವ ಪ್ರಕ್ರಿಯೆಯನ್ನು ಗೌರವದಿಂದ ಕಂಡಿದ್ದಾರೆ. ದಾಂಪತ್ಯದಲ್ಲಿನ ಕಾಮ-ಪ್ರೇಮವಾಗುವ ಸ್ಥಿತಿ ವಾತ್ಸಲ್ಯಕ್ಕೆ ಕಾರಣೀಭೂತವಾಗಿದೆ.

ಮದುವೆಯಾದ ಹೊಸತರಲ್ಲಿ ಇದ್ದ ನಗೆ ಬಾಳುವೆ ದಿನ ಕಳೆದಂತೆ ಮಾಸುತ್ತ ಬರುತ್ತದೆ. ನಗು-ಸುಖ - ಸಂತೋಷ ದಾಂಪತ್ಯದ ಜಗತ್ತಿಗೆ 'ಬಿಸಿಲುಗುದುರೆ'ಯಾಗುತ್ತದೆ. ಅಂದಿಗೂ ಇಂದಿಗೂ ವ್ಯತ್ಯಾಸವಾದ ಸಖಿಯ

ರೀತಿಯನ್ನು ಕವಿ ಹಂಚಿಕೊಳ್ಳುತ್ತಾನೆ. ಸೋತು ಬಸವಳಿದ ಸಖಿಯನ್ನು ಮೊದಲಂತೆ 'ನಗುವಾಕಿ'ಯಾಗು ಎಂದು ಕೇಳಿಕೊಳ್ಳುವ ಭಾವಯಾಚನೆ 'ಬಿಸಿಲುಗುದುರೆ' ಗೀತೆಯಲ್ಲಿದೆ.

ಹಳ್ಳಾದ ದಂಡ್ಯಾಗ ಮೊದಲಿಗ ಕಂಡಾಗ
ಏನೊಂದು ನಗಿ ಇತ್ತs
ಏನೊಂದು ನಗಿ ಇತ್ತ ಏಸೊಂದು ನಗಿ ಇತ್ತ
ಏರೀಕೆ ನಗಿ ಇತ್ತs
ನಕ್ಕೊಮ್ಮೆ ಹೇಳ ಚೆನ್ನಿ ಅನಗೀ ಇತ್ತಿತ್ತ
ಹೋಗೇತಿ ಎತ್ತೆತ್ತs

ಅಂದು ಮೊದಲಿಗೆ ಹಳ್ಳಾದ ದಂಡ್ಯಾಗ ಕಂಡಾಗ ಕಣ್ಣಾಗಿನ ಬೆಳಕೇs, ಮಾದ್ಯಾಗಿನ ತಳುಕು, ತುಟಿಯಾಗಿನ ಝುಳಕು, ಉಡುಗಿಯ ಮಾಟ, ನಡಿಗೆಯ ಧಾಟಿ ಸೊಗಸಾಗಿತ್ತು. ಆದರೆ ಈಗ ಅವೆಲ್ಲಾ ಎಲ್ಲಿ ಹೋತೋ ಏನೋ ಎಂದು ನೋಯುವ ಸಖ ಮೊದಲಿನ ನಗೆ ಇಲ್ಲವಾದದ್ದಕ್ಕೆ ತಾನೇ ಕಾರಣ ಹೇಳಿದ್ದಾನೆ.

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲೆಮ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಪಾಂಗ
ಬಂತಂತ ಮುಪ್ಪುಬ್ಯಾಗ !

'ಕಾಡುವ ಬಡತನ' ಮೇಲಿಂದ ಮೇಲೆ ಬಂದಪ್ಪಳಿಸಿದ ಮಕ್ಕಳ ಸಾವು ಸಖಿಯನ್ನು ಒಳಿಮ್ಯಾಲಿನ ಸುಟ್ಟಹಪ್ಪಳವನ್ನಾಗಿಸಿದೆ. ಸೊರಗಿ ಸೊಪ್ಪಾದ ಸಖಿ ಕಷ್ಟದ ಮುಪ್ಪಿಗೆ ಸಿಲುಕಿದ್ದಾಳೆ. ಹೀಗಿರುವಾಗ ನಗು ಇರುವುದಾದರೂ ಹೇಗೆ ಸಾಧ್ಯ? ಅಂದಿನ ನಿನ್ನ ನಗುವ ಕಣ್ಣು ನನ್ನ ಬಿಸಿಲುಗುದುರಿಯ ಸವ್ವಾರಿಯಾಗಿದೆ. ಆ ಕನಸ ನನಸಾಗಲಾರದೆ, ಎಂದು ಕವಿ ಸಖಿಯಲ್ಲಿ ಕೇಳುತ್ತಿದ್ದಾನೆ.

ಮುಂಗಾರಿನ ಕಣ್ಣಸನ್ನಿ ಹಾಂಗ ನಿನ ನಗಿ ಚೆನ್ನಿ
ಮುಂಚೊಮ್ಮೆ ಮಿಂಚಿತ್ತ
ನಿನ ಮಾರಿ ನಿಟ್ಟಿಗೆ ಹಚ್ಚಿ ದಿಟ್ಟಿ ದಿಟ್ಟಿಗೆ
ನೋಡ್ತೇನಿ ನಾನಿತ್ತ!' '೧೫'

ಸಖಿಯ ನಗೆ, ಉತ್ಸಾಹಗಳ ಮಾಯಾವಾಗುವಿಕೆಗೆ ಕಾರಣ ಬದುಕಿನ ದಾರಣ ಹೊಡೆತ, ಇಡೀ ವ್ಯಕ್ತಿತ್ವವನ್ನೇ ಕಬಳಿಸಿ ಬಿಡುವ ಈ ಹೊಡೆತಗಳಿಂದಾಗಿ ಸೋತು ಸೊಪ್ಪಾದವಳ ಕುರಿತ ಕಾಳಜಿ ಸಖನಿಗಿದೆ. ನೋವಿನ ನಡುವೆಯು ನಗುವನ್ನು ಆಶಿಸುವ ಗಂಡಿನ ಬದುಕಿನ ಗ್ರಹಿಕೆ ಹೆಣ್ಣಿನ ಗ್ರಹಿಕೆಗಿಂತ ಭಿನ್ನವಾಗಿದೆ. ಆದರೆ ನಗೆ ಇತ್ತಿತ್ತ ಹೋಗೀತಿ ಎತ್ತೆತ್ತ ಎಂಬ ಆತಂಕದ ನಡುವೆಯು ಅವಳನ್ನು ಎಚ್ಚರಿಸುವ ಧ್ವನಿ ಗಾಢವಾಗಿದೆ.

ತನ್ನ ದುಃಖ ಸಖನ ಅರಿವಿಗೆ ಬಾರದಿರಲಿ ಎಂದೇ ದುಃಖ ಹುದುಗಿಸಿ ನಗುವ ಸಖಿಯ ನಾಟಕವನ್ನು 'ಹುದುಗಲಾರದ ದುಃಖ' ಕಾವ್ಯದಲ್ಲಿ ಸಖ ಬಹಿರಂಗ ಪಡಿಸುತ್ತಿದ್ದಾನೆ.

ಹುದುಗಲಾರದ ದುಃಖ ಹುಗಿದಿರಿಸಿ ನಗೆಯಲ್ಲಿ
ನಸುನಗುತ ಬಂದೆ ಇದಿರು
ಇನಿತು ತಿಳಿಯದ ಮೂಢನೆಂದು ಬಗೆದೆಯೆ ನನ್ನ

ಇದು ಯಾವ ಊರ ಚದುರ ಎದೆಯೊಳಗೆ ವಿರಹ ತುಂಬಿರುವ ನೋವನ್ನು ಮುಚ್ಚಿಟ್ಟು ನಸುನಗುವ ನಿನ್ನ ನಟನೆ ನನಗೆ ತಿಳಿಯುತ್ತಿದೆ.

ನನ್ನ ಕೈ ಮುಟ್ಟಿ, ಮೈ ಮುಟ್ಟಿ ನನ್ನ ಮನ ಸಂತೈಸಲೆಂದು ಬಗೆವವಳು ನೀನು. ಆದರೆ ನಿನ್ನ ಮನಃ ಮುಟ್ಟುವ ಹಕ್ಕು ನನಗಿದೆ. ಸುಳ್ಳು ಸುಖ ಮೆರೆಸುವ ಸಾಹಸಬೇಡ

ಮಮತಾಜಳನು ಹುಗಿದು ತಾಜಮಹಲನು ಕಟ್ಟಿ
ನಿಜ ದುಃಖ ಮೆರೆಸಬಹುದೆ? '೨೫'

ಎಂದು ಪತ್ನಿಯ ನೋವನ್ನು ಅರಿಯಲು ಪ್ರಯತ್ನಿಸುತ್ತಿದ್ದಾನೆ 'ನಗಿನವಿಲು' ಕವನದಲ್ಲಿನ ವಿರಹಿ ಕೋಕಿಲ ಕಣ್ಣೀರಿನ ಮಳೆಯೊಂದಿಗೆ ತನ್ನ ದುಃಖವನ್ನು ತೋಡಿಕೊಳ್ಳುತ್ತಿದೆ,

ಒಂದು ಜೀವ ನೊಂದು ಕೊಂಡು
ಹಗಲಿರುಳು ಮಿಡಕಾಡುತಿತ್ತ
ಮಿಡುಕುತ್ತಿತ್ತ ತೊಡಕತ್ತಿತ್ತ
ಏನೋ ಒಂದು ಹುಡುಕುತ್ತಿತ್ತು
ದೂರಕದ್ದಕ್ಕೆ ಬಾಡತ್ತಿತ್ತ '೧೬'

ಎಂಬ ನುಡಿಗಳಲ್ಲಿ ಸಖನಿಗೆ ಪರಿತಪಿಸುವ ಚಿತ್ರ ಸ್ಪಷ್ಟವಾಗುತ್ತದೆ.

ಬೇಂದ್ರೆ ವಿರಹದಿಂದ ಒಲವಿನ ಅಪೇಕ್ಷೆ ತೀವ್ರಗೊಳ್ಳುತ್ತದೆ. ಎಂಬ ಭಾವವನ್ನು 'ಮರೆಯುವೆಯೋ, ಅರಿಯುವೆಯೋ', 'ಎಲ್ಲಿರುವೆ ರಾಜ ಗಂಭೀರ'ಗಳಲ್ಲಿ ವ್ಯಕ್ತಪಡಿಸಿದ್ದಾರೆ. ಪಾಟಲೀಪುತ್ರದ ರಾಜನೊಬ್ಬ ಅನೇಕ ಹೆಣ್ಣುಗಳನ್ನು ತನ್ನ ಅಂತಃಪುರಕ್ಕೆ ಸೇರಿಸಿಕೊಳ್ಳುತ್ತಾನೆ. ಆ ಹೆಣ್ಣುಗಳ ಸ್ಥಿತಿ ಈ ವಿರಹಗೀತೆಗಳಲ್ಲಿವೆ

'ಎಲ್ಲಿ ಮರೆಯುವಿಯೋ

ಇಲ್ಲ ಅರಿಯುವೆಯೋ! ನಮ್ಮನ್ನs ತನ್ನ ಆಸೆಗಾಗಿ ಹೆಣ್ಣುಗಳನ್ನು ಕೂಡಿಹಾಕಿದ ರಾಜನಿಗೆ ಹೆಣ್ಣಿನ ಮನಃಸ್ಥಿತಿ ಹೇಗೆ ಅರ್ಥವಾದೀತು. ಮರೆತುಹೋಗುವ ಸಾಧ್ಯತೆಯೇ ಇರುವ ನಮ್ಮ ಬಗ್ಗೆ ನಮ್ಮ ಒಲುಮೆಯ ಬಗ್ಗೆ, ಸಂಕಷ್ಟದ ಬಗ್ಗೆ, ಅರಿಯುವಿಯೋ ಇಲ್ಲವೋ ನಮ್ಮನ್ನು ಬೆರೆಯುವಿಯೋ ನಮ್ಮನ್ನ! ಅವನ ಮೊದಲ ಸೋಂಕಿನ ನೆನಪಿದೆ. ನೆನಪಿನ ನವಿರಿಂದ ಮತ್ತೊಮ್ಮೆ ಅವನನ್ನು ನೋಡ ಬಯಸಿ, ಸೇರ ಬಯಸಿ ಕರೆಯುತ್ತಿದ್ದಾಳೆ

ಇರುಳು ಮುಸುಕಲು, ಬಂದು - ನೆರಳು ನೆರೆದಿವೆ ಇಲ್ಲಿ
ಚೆಲುವ ಗೊಂಬಿಗಳಲ್ಲಿ
ಒಲುಮೆಯುಸಿರನು ತುಂಬಿ
ಪೊರೆಯುವಿಯೋ ನಮ್ಮನ್ನಾ '೧೭'

ಎಂದು ಆತನ ಭಾವದಿಂದ ಬೇಡಿಕೊಳ್ಳುತ್ತಿದ್ದಾರೆ. ಎಲ್ಲಿರುವೆ ರಾಜ ಗಂಭೀರಾ- ಎಂದೇ ಪ್ರಾರಂಭವಾಗುವ ಶೀರ್ಷಿಕೆ ಗೀತೆಯಲ್ಲಿ ಹೆಣ್ಣಿನ ವಿರಹ ಕಾತರತೆಯು ವಿವಿಧ ಭಾವಗಳಲ್ಲಿ ವ್ಯಕ್ತಗೊಂಡಿದೆ. ನಲ್ಲನಿಗಾಗಿ ಕಾತರಿಸಿ ಕಂಗಾಲಾದ ಜೀವ ಅವನ ನಿಷ್ಠುರವನ್ನು ಸಹಿಸಿಲಾಗದೆ ಗೋಳಿಡುತ್ತಿವೆ. 'ಕಲ್ಲುಗೋಡೆಯೂ ಕೂಡ ಅವರ ನೋವಿಗೆ ಸ್ಪಂದಿಸುತ್ತಿವೆ ಆದರೆ ನೀನು ಮರುಗೂಡದೆ ಎಲ್ಲಿರುವೆ' ನಮ್ಮ ಬದುಕಿನಲ್ಲಿ 'ಅಮವಾಸೆ ಹರಹಿದೆ' ಬೆಳದಿಂಗಳ ನೀಡು

ಕಾಣದ ವಸ್ತುವ ಕಾಣಬೇಕೆಂದಾಸೆ
ಮಿತಿಯ ಮೀರಿದೆ ಜೀವಾ
ನಲ್ಲ, ನೀರಡಿಸಿದೆ ಕಾವೇರಿ ಆರಿದೆ
ಎಲ್ಲಿರುವೆ ರಾಜಗಂಭೀರಾ ನೀರಾ
ತನ್ನ ಬಿಡುವೆಯೆ ತನಗೆ ಎರವಾಗಿ ಹೊರತಾಗಿ
ನಿರ್ಜಿವವೀ ಜೀವಾ
ಎಲ್ಲಿರುವೆ ರಾಜಗಂಭೀರಾ ತಣಿಸು ಬಾ ನಮ್ಮನ್ನು '೧೮'

ಎಂದು ಕರೆಯುವ ನೀರೆಯರ ಆರ್ತ ಧ್ವನಿ ಗೀತೆಯ ತುಂಬೆಲ್ಲಾ ಅನುರಣಿಸುತ್ತಿದೆ.

"ನೀನಗೆ ನಡೆದಾಗ" ಕವನ ಮೇಲ್ನೋಟಕ್ಕೆ ನೀರಿಗೆ ಹೋಗಿ ಬರುವ ಹೆಣ್ಣಿನ ಚಿತ್ರಾಣವನ್ನು ಹೇಳುತ್ತದೆ. ಆದರೆ ಪ್ರಣಯ ದಾಟವನ್ನು ಮುಗಿಸಿ ತಿರುಗಿ ಬಾರದಂತೆ ಹೊರಟು ಹೋಗಿರುವ ಸಂದರ್ಭವನ್ನು ಧ್ವನಿ ಪೂರ್ಣವಾಗಿ ಚಿತ್ರಿಸಿದೆ.

ನಲ್ಲನಿಗಾಗಿ ಕಾತರಿಸಿ ಕಾದು ನಿಂತಿರುವ ನಲ್ಲೆಯ ವಿರಹ 'ಹುಬ್ಬಳ್ಳಿಯಾಂವಾ' ಕಾವ್ಯದಲ್ಲಿ ಮೂಡಿ ಬಂದಿದೆ. 'ಪ್ರಣಯ ಭಂಗದಿಂದ ವಂಚಿತಳಾದ ಹೆಣ್ಣಿನ ಉನ್ಮಾದ ಸ್ಥಿತಿಯ ಸಂದರ್ಭ' ಎಂಬ ಹಿನ್ನೆಲೆಯಲ್ಲಿ ಈ ಗೀತೆ ಚಿತ್ರಿತವಾಗಿದೆ.

ಇನ್ನೂ ಯಾಕ ಬರಲಿಲ್ಲವ್ವಾ ಹುಬ್ಬಳ್ಳಿಯಾಂವ
ವಾರದಾಗ ಮೂರು ಸರತಿ ಬಂದು ಹೋದಾಂವಾ

ಎಂದು ನಲ್ಲನ ಬರುವಿಕೆಗಾಗಿ ನಲ್ಲೆ ಕಾದು ನಿಂತಿದ್ದಾಳೆ. ಬಂದು ಹೋಗಿ ಮಾಡುತ್ತಿದ್ದ ನನ್ನವ ಇಂದಿನ್ನೂ ಬಂದಿಲ್ಲ ಎಂಬ ಕಾತರದಿಂದ ಅವನ ರೀತಿ-ನೀತಿ ತನ್ನೊಂದಿಗೆ ನಡೆದುಕೊಳ್ಳುತ್ತಿದ್ದ ಪ್ರೀತಿ ಇತ್ಯಾದಿಗಳನೆಲ್ಲಾ ನೆನಪಿಸಿಕೊಳ್ಳುತ್ತಾ ಆಜೋಗತಿಗೆ ಯಾವ ಕನಗೆತ್ತ ಪ್ರೇಮವನ್ನು ಸ್ಪಷ್ಟಪಡಿಸಿಕೊಳ್ಳುತ್ತಿದ್ದಾಳೆ.

ಜಲ್ಮ ಜಲ್ಮದ ಗೆಣ್ಣಾ ಆಗಿ ಬರತೇನಂದಾಂವಾ
ಎದಿಮ್ಯಾಗಿನ ಗೆಣತಿನ ಮಾಡಿ ಇಟ್ಟಕೊಂಡಾವಾ '೧೯'

ಇಂತಹವನ ನನ್ನನ್ನು ತೊರೆದು ಎತ್ತ ಹೋದ ಎಂಬ ನೋವು ಅವಳದು. ಕಾಮಕಾತರಳಾದ ಹೆಣ್ಣು ಕಾಮವನ್ನು ಪ್ರೇಮವನ್ನಾಗಿಸಿ ಕೊಳ್ಳದೇ ಉನ್ಮಾದ ಸ್ಥಿತಿಗೇರಿದ ಚಿತ್ರಣ ಈ ಕಾವ್ಯದಲ್ಲಿದೆ.

### ೫.೪ ವಾತ್ಸಲ್ಯ ಗೀತೆಗಳು

ಸೃಜನಶೀಲತೆಯ ನೆಲೆಯ ಪ್ರೇಮದ ಮತ್ತೊಂದು ಸ್ವರೂಪವನ್ನು ಕವಿಯ 'ಕರುಳಿನ ವಚನಗಳ'ಲ್ಲಿ ಗಮನಿಸಬಹುದು. 'ಕಾಮ-ಪ್ರೇಮ' ಸಂತತಿಯ ಮೂಲಕ್ಕೆ 'ಚಿರಂತನಾ'ವಾಗಿದೆ. ತಾಯಿ-ತಂದೆಯರ ವಾತ್ಸಲ್ಯದ ಪಾಕದಲ್ಲಿ ಮಿಂದ ಕವಿ 'ಬಾಲ್ಯಕಾಂಡ'ದ ಸವಿನೆನಪನ್ನು ತಮ್ಮ ಇಳಿವಯಸ್ಸಿನಲ್ಲಿ ಧೇನಿಸುತ್ತಾರೆ. ಅಜ್ಜಿ ಗೋದು-ಬಾಯಿ, ತಾಯಿ ಅಂಬಿಕೆ ಹಾಗೂ ಅರವಿಂದಾಶ್ರಮದ ಶ್ರೀಮಾತೆಯರು ಅವರ ಮಾತೃತ್ವಕ್ಕೆ ಪ್ರೇರಕಶಕ್ತಿಯಾಗಿದೆ. 'ಅಂಬಿಕಾತನಯದತ್ತ' ಎಂಬ ಕಾವ್ಯನಾಮವೇ ಅದರ ಮಾತೃತತ್ವಕ್ಕೆ ಸಾಕ್ಷಿಯಾಗಿದೆ. ತಾನು ತಾಯಿಯಿಂದ ಪಡೆದ ವಾತ್ಸಲ್ಯದ ಭಾವವನ್ನು ತಾನೇ ತಾಯಿಯಾಗಿ ತನ್ನ ಮಕ್ಕಳಿಗೆ ಧಾರೆ ಎರೆಯುವ ಸಂದರ್ಭಗಳನ್ನು ಕಾವ್ಯವನ್ನಾಗಿಸಿದ್ದಾರೆ. ತನ್ನ ಮಕ್ಕಳ ಆಟ-ಪಾಟ, ಪ್ರೀತಿ-ವಾತ್ಸಲ್ಯಗಳು ಅವರನ್ನು

ತಂದೆಯಾಗಿ, ತಾಯಿಯಾಗಿ ಹಾಡಹಚ್ಚಿದೆ. ಪಟ್ಟಪಾಡನ್ನು, ಶೋಕವನ್ನು ಹಾಡಾಗಿಸುವ ಮೋಡಿಯಲ್ಲಿ ಅವರು ತನ್ಮಯರಾಗಿದ್ದಾರೆ. ದಾಂಪತ್ಯಕ್ಕೆ ಸಾಕ್ಷಿಯಾದ ಮಕ್ಕಳ ಕುರಿತಾದ ವಾತ್ಸಲ್ಯ ಗೀತೆಗಳು ಪ್ರೇಮದ ಶೋಧನೆಯ ಮತ್ತೊಂದು ಆವಿಷ್ಕಾರಗಳಾಗಿವೆ.

ಕಾಮ ಪ್ರೇಮಗಳಲ್ಲಿ ಮಾಗಿ ತನ್ನನ್ನು ತಾನು ಪಕ್ವಕೊಳ್ಳುವ ಹೆಣ್ಣು ತಾಯ್ತನದಲ್ಲಿ ಮತ್ತೆ ಹೊಸ ಹುಟ್ಟನ್ನು ಪಡೆಯುತ್ತಾಳೆ. ತಾಯ್ತನದ ಆರಾಧನೆ ಕವಿಯ ಮುಖ್ಯ ಆಶಯವಾಗೇ ಬಂದಿರುವುದನ್ನು ಅದರ ಕವನಗಳಲ್ಲಿ ಗಮನಿಸಬಹುದಾಗಿದೆ. ಮಗುವಿನ ಬಹಿರ್ಮುಖ ಸೌಂದರ್ಯ ಆಟ-ಪಾಟ, ಜೊಲ್ಲು ಮಗುವಿನ ಆಗಮನದಿಂದ ತಾಯಿ-ತಂದೆಯರಲ್ಲಿ ಉಂಟಾದ ಅಪಾರವಾದ ಬದಲಾವಣೆ, ಅಲೌಕಿಕ ದೃಷ್ಟಿಗಳ ವೈವಿಧ್ಯತೆಯನ್ನು ಸ್ವತಃ ಕವಿ ಅನುಭವಿಸುತ್ತಾರೆ. ಗಂಡ-ಹೆಂಡಿರ ನಡುವೆ ಕಾಮ-ಪ್ರೇಮದ ಸಂಬಂಧವಿದ್ದಂತೆ ತಾಯಿ-ಮಗುವಿನ ಸಂಬಂಧವೂ ಕೆಸರು-ಕಮಲಗಳ ರೀತಿಯಂತಿದೆ ಎಂದು ಅಚ್ಚರಿಪಡುವಂತೆ ಇದೆ. ಮಗುವಿನ ಬಾಲಲೀಲೆಗಳನ್ನು ವಾತ್ಸಲ್ಯ ಗೀತಗಳನ್ನಾಗಿಸಿರುವ ಕವಿ ಜನಪದ ಸಾಹಿತ್ಯ ಕೀರ್ತನಕಾರರ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದು. ಹೆಣ್ಣಿನ ಆಸೆ-ಆಕಾಂಕ್ಷೆಗಳೆಲ್ಲಾ ಕುದಿಕುದಿದು ಅದು ಕಂದನಾಗಿ ಅವತರಿಸಿ ಬಂದಾಗ, ತಾಯಿಯ ಆನಂದ, ಆಶ್ಚರ್ಯ, ಆಂತಕಗಳು 'ಕಂಡೆ' ಎಂಬ ಗೀತೆಯಲ್ಲಿ ಚಿತ್ರಿತವಾಗಿದೆ.

ನನ್ನ ಬಯಕೆಗಳ ಬಸಿರಲ್ಲಿ ಮೊಳೆದ,<br>
ನನ್ನ ಬಸಿರಿನ ಬಯಕೆಯಲ್ಲಿ ಹೊಳೆದ ಮುದ್ದುಮೊಗವೆ?<br>
ಬಂದೆಯಾ ಇಂದು ಕಂದನಾಗಿ ನನ್ನೊಡಲಲಿ?

ಎಂದು ಅಚ್ಚರಿಪಡುತ್ತಾ ಮಗುವನ್ನು ತಾಯಿ ಆಹ್ವಾನಿಸುತ್ತಾಳೆ. ತಾನು ಕಲ್ಪಿಸಿಕೊಂಡಿದ್ದ ಒಂದೊಂದು ಚಿತ್ರವನ್ನೂ ತಾಯಿ ಇಲ್ಲಿ ಉತ್ತರಿಸುತ್ತಾಳೆ.

ನನ್ನ ಮನಸಿನ ಹಂದರದಲ್ಲಿದ್ದ ಒಲವಿನ ಮಿಡಿಯ<br>
ನನ್ನ ಕನಸಿನ ಗುಡಿಯಲ್ಲಿದ್ದ ನಲಿವಿನ ಕುಡಿಯೆ<br>
ಚೆಲುವಿನ ಕೈಪಿಡಿಯೆ<br>
ಕೈಗೆ ಒಂದು ಕಂಡೆನು ಎನ್ನಿಸಿದ ಕಂದಯ್ಯಾ

ಎನ್ನುವಲ್ಲಿ ತಾಯ ಸುಖ-ಹಿಗ್ಗು ಮೂಡಿ ಬಂದಿದೆ.

ಈ ವಾತ್ಸಲ್ಯದ ಪರಿಯನ್ನು ಸವಿಯನ್ನೂ ಚಪ್ಪರಿಸಬೇಕೆಂತೆ 'ಉಂಡೆನು' ಎನ್ನಿಸುವೆಯಾ ಬಾಯಿಗೆ ಒಂದು ಮುದ್ದೆ? ೧ ಎಂದು ಕೋರಿಕೊಳ್ಳುತ್ತಾಳೆ.

ಎಳೆಯ ಮಗುವಿನ ಒಂದೊಂದು ನಿಲುವು ತಾಯಿಗೆ ಅಚ್ಚರಿಯ ಮೂಟೆ! ಪ್ರಕೃತಿಯ ಒಂದೊಂದು ಸೃಷ್ಟಿಯ ಚೆಲುವನ್ನು ತನ್ನ ಮಗುವಿಗೆ, ಆಟಪಾಟಕ್ಕೆ ಆರೋಪಿಸುತ್ತಾ ಸಮಸ್ತ ಸೌಂದರ್ಯವನ್ನು ಮಗುವಿನಲ್ಲೇ ಕಾಣ ಬಯಸುತ್ತಾಳೆ.

ನನ್ನ ಮದ್ದಾನೆಯೆ! ನಿನ್ನ ತೋಳ ಸೊಂಡಿಲಾಡಿಸಪ್ಪಾ ಮಗುವೆ! ಆಡು-ಆಡು<br>
ನನ್ನ ಪಾರಿವಾಳವೇ! ನಿನ್ನ ಗೋಣನ್ನಾಡಿಸಪ್ಪಾ<br>
ನನ್ನ ಅರಸಂಚೆಯೇ! ಅಡಿಯಿಡು, ನಡೆ ನುಡಿ<br>
ಮಗುವೆ! ಆಡು-ಆಡು ! '೨'

ಮದ್ದಾನೆಯ ಸೊಂಡಿಲಾಟದಿಂದ ಆರಂಭಿಸಿ ತೊದಲ್ನುಡಿಯ ಗಿಳಿ ಮಾತಿನವರೆಗಿನ ಮಗುವಿನ ಲಾಸ್ಯ ಮನಸ್ಸಿಗೆ ಹರುಷ ತಂದಿದೆ. ಮಗುವಿನ 'ನಗೆ' ತಾಯ ಮನಸ್ಸಿಗೆ ನಿಸರ್ಗದ ರಮಣೀಯತೆಯನ್ನು ನೆನಪಿಸುತ್ತಿದೆ. ನಿದ್ದೆಯಿಂದ ಎಚ್ಚೆತ್ತಾಗ, ಅತ್ತಾಗ, ಕುಣಿಯುವಾಗ ಹೀಗೆ ಒಮ್ಮೊಮ್ಮೆ ಒಂದೊಂದು ನಗೆ. ಪ್ರಕೃತಿಯ ಚೆಂದವನ್ನೂ ಮರೆಸಬಲ್ಲ ನಗೆ ಮಗುವಿನದು ಹೀಗೆ 'ಆಡು' ಕವನದಲ್ಲಿ ಚಿತ್ರಿತವಾಗಿದೆ.

ಅದೆ ನಿದ್ದೆಯಿಂದೆಚ್ಚೆತ್ತಾಗಿನ
ಇನ್ನೂ ಅರಳದಿದ್ದ ನಿನ್ನ ನಗೆಯು
ಎಳೆ ನೇಸರಿನ ಹೊಂಬಿಸಲು ಕಂದಿಸಿತು
ಮುಗುಳು ನಗೆ
ಮಳೆಗಾಲ ಸಂಜೆಯ ಹೂಬಿಸಲ ಬಾಡಿಸಿತು
ನಿನ್ನ ಹುಚ್ಚುನಗೆ
ಮಾಗಿಯಿರುಳ ಬೆಳದಿಂಗಳ ಮರೆಯಿಸಿತು 'ಖ'
ತನ್ನ ಮಗುವಿನ ಅಳು-ನಗುಗಳಿಗೂ ತಾಯಿ ರುಚಿಯನ್ನು ಆರೋಪಿಸುತ್ತಾಳೆ
ನನ್ನ ಬೆಲ್ಲದಚ್ಚಿನ ಬೊಂಬೆಯೆ!
ನೀನು ನಕ್ಕರೊಂದು ರುಚಿ! ನೀನು ಅತ್ತರೊಂದು ರುಚಿ
ನೀನು ನಕ್ಕರೆ ಬೆಳಕಿನ ಬೆಳೆ ನೀನು ಅತ್ತರೆ ಮುತ್ತಿನ ಮಳೆ. 'ಳ'

ಎಂದು 'ನಗು-ಅಳು' ಕವನದಲ್ಲಿ ತಾಯಿ ಮಗುವಿನ ಅಳು-ನಗುಗಳ ರುಚಿ ನೋಡಿದ್ದಾಳೆ. ತನ್ನ ವಿವಿಧ ವಿಲಾಗಳಿಂದ ಮರಳು ಮಾಡುವ ಮಗು ಒಮ್ಮೆ ಮೆಲ್ಲಾರಿ ಮಾರ್ತಾಂಡನೆನಿಸಿದರೆ, ಇನ್ನೊಮ್ಮೆ ಗುಡ್ಡದ ಕುಮಾರಸ್ವಾಮಿಯಾಗಿ ತೋರಿದ್ದಾನೆ. ಸಿಂಗಾರದ ರಂಗನಾಯಕ, ಚೆಲುವ ಚೆನ್ನಕೇಶವ, ಮಲಗಿದ ಅನಂತಶಯನ ಹೀಗೆ ನಾನಾ ದೈವ ಸ್ವರೂಪವನ್ನು ಮಗುವಿನಲ್ಲಿ ನೋಡಿದ್ದಾಳೆ "ಅವ್ವಾ ನೋಡಿರೆ! ಮುದ್ದು ವಿಠ್ಠಲನ, ದಾಸರ ದಾಸನ, ಟೊಂಕದ ಮೇಲೆ ಕೈಯಿಟ್ಟವನ" ಎಂದು ಪರಮಾನಂದದಿಂದ ಪುಳಕಿತಳಾಗುವಳು. ಮಗುವಿನ ಬಾಲಲೀಲೆಗಳು, ಸಹಜವಾದ ಚಟುವಟಿಕೆಗಳೆಲ್ಲವೂ ತಾಯಿಗೆ 'ದಶಾವತಾರ'ದ ಕಲ್ಪನೆಯನ್ನು ಮೂಡಿಸಿದೆ. ಪರಮಾತ್ಮನ ಪ್ರತಿನಿದಿಯೇ ಇವನೆನಿಸುವ ವಿಷ್ಣುವಿನ ನಾನಾ ಲೀಲೆಗಳನ್ನೆಲ್ಲಾ ಮಗುವಿನ ಅನ್ವಯಿಸುತ್ತಾಳೆ

ದಶಾವತಾರ
ನೆಲದ ಮೇಲೆ ಈಸುವುದು
ನೋಡಿದಿರಾ ಮೀನವತಾರಾ!
ಮನುಕುಲೋದ್ಧಾರಕ ನನ್ನ ಕುವರ
ತಾಯಿಯ ಮೇಲೆ ಕೈಯೆತ್ತಲು ಬಂದ
ದಿಟ್ಟ ಪರಶುರಾಮನ ಕಂಡಿರಾ!
ಶಾಪ ಚಾಪ ಸವ್ಯಸಾಚಿ ನನ್ನ ಕುವರ!
ಕಂಡಿರಾ ದಿಗಂಬರ ಮೂರ್ತಿ! ಬಾಲ ಬುದ್ದದೇವ! 'ಞ'

ಹೀಗೆ ಮಕ್ಕಳ ಚಿರಪರಿಚಿತ ಬಾಲಲೀಲೆಗಳೆಲ್ಲಾ ತಾಯಿಯ ಕಣ್ಣಿಗೆ ಅನುಪಮ ಲೀಲೆ ಎನಿಸಿದೆ.

ಮಗುವಿನಲ್ಲಿ ಭಗವಂತನ ಅಂಶವನ್ನು ಗುರುತಿಸುವ ಈ ದರ್ಶನ ಸ್ತುತ್ಯಾರ್ಹ. ತಾಯಗರ್ಭದಲ್ಲಿರುವಾಗಲೇ ಮುಷ್ಠಿಗಟ್ಟಿಕೊಂಡಿರುವ ಮಗುವಿನ ಕೈಯಲ್ಲಿ ಏನಿರಬಹುದೆಂಬ ಕುತೂಹಲ ತಾಯಿಗೆ ಮುಷ್ಠಿಗಟ್ಟಿರುವ ಅಂಗೈಯನ್ನು ಬಿಚ್ಚಿದರೆ ತಾನು ಏನು ಕಾಣಬಲ್ಲೆ ಎಂಬ ಕುತೂಹಲ. ತೆರೆಯಬಾರದು ಎಂಬ ಕಳವಳನ್ನೊಳಗೊಂಡ ತಾಯ ಹೃದಯದ ಕಾತರ 'ಅಂಗೈ' ಕವನದಲ್ಲಿ ಮೂಡಿ ಬಂದಿದೆ.

ನನ್ನ ಮಗುವಿನ ಮುಚ್ಚಿದ ಮುಟ್ಟಿಗೆಯಲ್ಲಿ
ಮೂಲೋಕದೊಡೆತನವಿರಬಹುದು
ಧ್ರುವನ ಚಿಕ್ಕೆಯಿರಬಹುದು
ಕುಬೇರನ ಸಂಪತ್ತಿಯಿರಬಹುದು
ನವಶಕ್ತಿಗಳಿರಬಹುದು
ತೆರೆದು ನೋಡಲೆ...? ಬೇಡ !
ಅಂಗೈಯಲ್ಲಿರದಿದ್ದರೂ ಮುಂಗೈಯಲ್ಲಾದರೂ ಇರಬಹುದು '೬'

ಎಂಬ ಸೋಲಿಲ್ಲದ ನಿರೀಕ್ಷೆಯಲ್ಲಿದ್ದಾಳೆ. ಆಟ-ಪಾಟಗಳಲ್ಲಿ ನಲಿದ ಮಗು ಸ್ವಲ್ಪ ಮೆತ್ತಗಾದರೆ ತಾಯಿಗೆ ಆತಂಕ! ಹೃದಯ ತಲ್ಲಣಿಸಿ ಮಗುವಿಗೇನಾಯ್ತೋ ಎಂಬ ಕಳವಳದೊಂದಿಗೆ ಕಂಡವರ ದೃಷ್ಟಿ ತಾಗಿರಬಹುದೋ ಏನೋ ಎಂಬ ಸಂಶಯ!

ಉಳಿದವರಂತಲ್ಲದ ತಾಯಿ ! ತನ್ನ ಮಗುವಿಗೆ
ಮುಂಜಾವಿನ ಮಂಜು ತಾಕಿತೋ?
ಮುಸ್ಸಂಜೆಯ ನಂಜು ತಾಕಿತೋ?
ಹೂಗಳು ಕಣ್ಣು ಬಿಟ್ಟವೋ ?
ಚಂದ್ರನ ಕಿರಣ ನೆಟ್ಟವೋ?
ಎಲ್ಲಿ ಬಚ್ಚಿಡಲಿ -ಎಲ್ಲಿ ಮುಚ್ಚಿಡಲಿ ನನ್ನ ಕಂದವ್ವನ?
ತಾಯಿ ಕಾಡಿದ ಮೇಲೆ ಕಾಯುವರದಾರು? '೭'

ಎಂದು ತನ್ನ ಕರುಳಿನ ಕಳವಳವನ್ನು 'ದೃಷ್ಟಿ' ಕವನದಲ್ಲಿ ತೋಡಿಕೊಂಡಿದ್ದಾಳೆ. ಈ ಸುಂದರ ಮಗು ತನ್ನನ್ನು ಲೌಕಿಕದ ಮೋಹದಿಂದ, ನೋವಿನಿಂದ, ದುಃಖದಿಂದ ಪಾರುಮಾಡಲೇ ಬಂದಿದೆ ಎಂಬ ಅಪಾರ ನಂಬುಗೆ ತಾಯಿಯದ್ದು. 'ಸುಖದ ಸೆರೆಯಾಗಿ, ದುಃಖದ ಮರೆಯಾಗಿ, ಹಿಗ್ಗಿನ ತೊರೆಯಾಗಿ, ತಳಮಳದ ನೆರೆಯಾಗಿ, ಜಗದ ದೊರೆಯಾಗಿ ಬಂತು ನನ್ನ ಮಗುವಿನ ಮಮತೆ' ಎಂದು 'ಬಂತು' ಕವನದಲ್ಲಿ ವಿವರಿಸಿದ್ದಾಳೆ. ಮಮತೆಯ ಮಗು ಅಪ್ಪನಂತಿಹುದೋ, ಅಮ್ಮನಂತಿಹುದೋ ಕುತೂಹಲ 'ಅರ್ಧನಾರಿ-ನಟೇಶ್ವರ' ಕವನದಲ್ಲಿ ಸತಿ-ಪತಿಯರ ಐಕ್ಯದೊಳಗೊಂದಾಗಿ ಅರಳಿ ನಿಂತ ಮಗುವಿನ ಕಾಯದಲ್ಲಿ ತಮ್ಮನ್ನು ಗುರುತಿಸಲು ತಾಯಿ ಪ್ರಯತ್ನಿಸಿದ್ದಾಳೆ.

ಮಗುವಿನ ರೂಪ ಲಾವಣ್ಯವನ್ನು ತಮ್ಮ ದಾಂಪತ್ಯದ ಅನುರಾಗದೊಂದಿಗೆ ತಾಳೆ ನೋಡುವ ತಾಯಿ

ಕಂದಾ! ನಿನ್ನ ಮುಖದ ಮುದ್ರಾಕೃತಿಯು ನನ್ನಂತಿದೆ
ಆದರೆ ದೇಹದ ಭದ್ರಾಕೃತಿಯು ಅವರಂತಿದೆ
ಕಣ್ಣೊಳಗಿನ ಕರುಣೆ ನನ್ನಂತಿದೆ

ನೋಟದೊಳಗಿನ ಸರಣಿ ಅವರಂತಿದೆ
ಎನ್ನುತ್ತಾ 'ಗಂಡು ಗಾಡಿಯಲ್ಲಿ ಹೆಣ್ಣು ಮೋಡಿ ಬೆರತು
ಅರ್ಧನಾರಿ-ನಟೇಶ್ವರನ ಅಭಿನವ ಸೃಷ್ಟಿಯಾದೆಯಲ್ಲ 'ಅ'

ಎಂದು ಮನಗಾಣುತ್ತಾಳೆ.

'ಅವರೇನು ಬಲ್ಲರು'! ಎಂಬ ಗೀತೆಯಲ್ಲಿ 'ಮಕ್ಕಳಿಲ್ಲದಿದ್ದರೆ ಒಂದು ಚಿಂತೆಯಂತೆ, ಇದ್ದರೆ ನೂರೊಂದು ಚಿಂತೆಯಂತೆ' ಎನ್ನುವವರ ಕೊಂಕು ನುಡಿಯನ್ನು ಯಾವ ತಾಯಿ ತಾನೇ ಒಪ್ಪಿಯಾಳು? ಅಂಥವರನ್ನು ಕುರಿತು 'ಅನ್ನುವರೇನು ಬಲ್ಲರು? ಎಂದು ತನ್ನ ಅಸಮ್ಮತಿಯನ್ನು ವ್ಯಕ್ತಪಡಿಸುವುದಲ್ಲದೆ

ನನ್ನ ಚಿಂತಾಪಹಾರಕ ಚಿಂತಾಮಣಿ !
ಚಿಂತೆಯ ಪಂಚಾಗ್ನಿಯಲ್ಲಿ ತಪ ಮಾಡಿಸಿ
ತಪಸ್ವಿನಿಯ ಮಾಡಿಸಿದೆ

ಎಂದು ಮಗುವಿಗಾಗಿ ಚಿಂತಿಸುವುದೂ ಒಂದು ಸುಕೃತ ಎಂದು ಭಾವಿಸಿದ್ದಾಳೆ. ಮಗುವಿನಿಂದ ಲಭಿಸಬಹುದಾದ ನೋವು ನಲಿವುಗಳೆರಡನ್ನೂ ಅಳೆದು ನೋಡಿ

ಅಮೃತದ ಝರಿಯೇ !
ನಿನ್ನ ವಿಷವುಂಡು ನೀಲ ಕಂಠಾಭರಣಳಾದೆ
ಸುಖದುಃಖ ಸಮನೆಂಬ  ಯೋಗಿಯ ಮಾಡಿದೆ '೯'

ಎಂದು ಸ್ವಾನುಭವ ಸಿದ್ಧಾಂತವನ್ನೇ ಸಾರಿ ಹೇಳುವಳು.

ಹಾಲು ಹಸುಳೆಗೆ ತನ್ನ ಮೊಲೆ ಹಾಲನ್ನು ಕುಡಿಸುವ ಆ ತಾಯಿಯ ಸೌಭಾಗ್ಯ ಹೇಳತೀರದು. ಆ ಮಾತೆಯ ಪುಣ್ಯವನ್ನೂ, ಆನಂದವನ್ನೂ ತಾಯಿ ಸಾರ್ಥಕತೆಯಿಂದ ಹೇಳಿಕೊಳ್ಳುತ್ತಾಳೆ

ಮೊಲೆ
ನನ್ನ ಬಾಲಗೋಪಾಲನ ಗೋದಲೆಗಳವ್ವಾ ಇವು
ಕಪಿಲೆ ಕಾಮಧೇನುಗಳು ಕಟ್ಟಿಹವಿಲ್ಲಿ ಅವನಿಗೇನು ಕಡಿಮೆ ?
ವಾತ್ಸಲ್ಯದ ವಿಜಯ ಯಾತ್ರೆಯಲ್ಲಿ
ನನ್ನ ಕಂದನೂದುವ ಅವಳಿ ಶಂಖಗಳಿವು
ಹಾಲಿನ ಬಟ್ಟಲುಗಳಲ್ಲ ; ಮಾಂಸದ ಬಟ್ಟಲುಗಳಲ್ಲ !
ಜಗದಂಬೆಯು ಜೀವ ಶಿಶುವನ್ನು ಮಲಗಿಸಿ
ತೂಗುವ ತೊಟ್ಟಿಲ ಕಾಲುಗಳಿವು
ಅವನಿಗೇನು ಕಡಿಮೆ? '೧೦'

ಅಕ್ಕರೆಯಿಂದ ತನ್ನ ಮೊಲೆ ವಾಲನ್ನು ಮಗುವಿಗೆ ನೀಡುವರು ಎಂಥ ಸುಖವನ್ನು ಅನುಭವಿಸುತ್ತಾಳೆ ಎಂಬುದನ್ನು ಇಲ್ಲಿ ಭಾವಪೂರ್ಣವಾಗಿ ಚಿತ್ರಿಸಲಾಗಿದೆ. ವಾತ್ಸಲ್ಯದ ಮುಂದೆ ಇನ್ನಾವ ಭಾವವೂ ಸರಿಗಟ್ಟದೂ ಎಂಬ ಭಾವ ಇಲ್ಲಿ ಮಿಡಿದಿದೆ.

ಹುಟ್ಟಿದ ಮಗುವಿಗೆ ಹೆಸರನ್ನಿಡುವುದು ತಾಯಿ-ತಂದೆಯರಿಗೆ ಅತೀ ಪ್ರಯಾಸದ ಕೆಲಸ. ತಮ್ಮೆಲ್ಲಾ

ವಾತ್ಸಲ್ಯ ವೈಭವವನ್ನು ಮರೆಸುವಂತಹ ಹೆಸರನ್ನು ಇಡಬೇಕು ಎನ್ನುವುದೇ ಅವರ ಆಶಯ. ತಮ್ಮ ಆಸೆ ಆಕಾಂಕ್ಷೆ ಪ್ರೀತಿ ವಾತ್ಸಲ್ಯಗಳನ್ನು ಹೆಸರಿನ ಚೌಕಟ್ಟಿಗೆ ಬಂಧಿಸುವುದು ಪ್ರಯಾಸದ ವಿಷಯವೇ ಹೌದು 'ಕಂದಾ'ಎಂಬ 'ಕರುಳಿನ ವಚನ' ದಲ್ಲಿ

'ನನ್ನ ಬಸಿರಿನ ತಾವರೆಯಲ್ಲಿ ಬಳೆದ ಬಾಲ ಬ್ರಹ್ಮಾ!
ಹೆಸರಿನ ಅಪ್ಪಿಗೆಗೆ ಒಪ್ಪದ ಆನಂದ ಕಂದಾ!
ಏನೆಂದು ಕರೆಯಲಿ, ಏನೆಂದು ಕರೆಯದಿರಲಿ ನಿನ್ನ?
ಅನಂತನ ಅನಂತನಾಮದಲ್ಲಿಯಾದರೂ ಇಂಬುಂಟೆ ? '೧೧'

ಎಂದು ತನ್ನ 'ಉದರದ 'ಮುತ್ತನ್ನು' ಆಸೆಯ ಆನಂದದಲ್ಲಿ ಕರೆಯುತ್ತಾಳೆ. ಈ ವಾತ್ಸಲ್ಯದ ಸುಖ ಅಲೌಕಿಕವಾದದ್ದೂ ಮಗುವಿನ ಅನಂತ ಲೀಲೆಗಳು, ಅಮಗಳಿಂದಾಗುವ ಅಮಿತವಾದ ಆನಂದವನ್ನೂ ತಾಯಿ ಅನುಭವಿಸುತ್ತಾ ಧನ್ಯಳಾಗುತ್ತಾಳೆ. ತಾನು ಹುಟ್ಟಿದ ಕ್ಷಣದಿಂದ ತಾಯಿಯ ತನು-ಮನಗಳನ್ನು ತನ್ನ ಬಾಲಲೀಲೆಗಳಿಂದ ಯಥೇಚ್ಛವಾಗಿ ತಣಿಸುವ ಹಸುಗೂಸಿನ ಹಿರಿಮೆಯನ್ನು ಕುರಿತು ಅವಳು ತಬ್ಬಿಬ್ಬಾಗುತ್ತಾಳೆ. ತನ್ನ ಕಡು ಕಷ್ಟದ ಕಲ್ಮಷದಿಂದ ಜನಿಸಿದ ಮಗು ಮುಗ್ಧ ಪವಿತ್ರತ್ಮವಾಗಿರುವುದನ್ನು ಕಂಡು ಅಚ್ಚರಿಪಡುತ್ತಾಳೆ.

ನನ್ನ ಪಂಕದಲ್ಲಿ ಹುಟ್ಟಿ ಲೇಪವಿಲ್ಲದಿರುವೆ
ನನ್ನ ಪಂಕಜವೆ !
ನನ್ನ ನೀರಲ್ಲಿ ಬೆಳೆದು ನೀರಾಳದಲ್ಲಿರುವೆ
ನನ್ನ ನೀರಜವೆ !

ಎಂದು ಕೊಂಡಾಡುತ್ತಾಳೆ

ಒಡೆಯಲು ಬಾರದ ಬಿಡಪಿನಂತಿರುವೆ
ಬಿಡಿಸಲು ಬಾರದ ತೊಡಕಿನಂತಿರುವೆ'

ಎಂದು ಅಶ್ಚರ್ಯ ಸೂಚಿಸುತ್ತಾಳೆ.

'ನಿನ್ನಳವು ಆಸದಳ' ನಿನ್ನೆಲ್ಲಾ ಗುಟ್ಟರಿಯೆ ನಾನು ನವೋನವ ಚಮತ್ಕಾರವೆ ನೀನಾದ ಲೋಕದ ಜೀವಿ ೧೨ ಎಂದು ಬಯಲಾಗದಿರುವ ರಹಸ್ಯದ ಬಗ್ಗೆ ಹೆಮ್ಮೆ ಪಡುತ್ತಾಳೆ.

ಮಗು ಮಲಗದ ಚಂಡಿ ಹಿಡಿಯುವ ಸಂದರ್ಭದಲ್ಲಿ ತಾಯಿ 'ಗುಮ್ಮ' ನನ್ನು ಕರೆದು ಹೆದರಿಸುವ ಗುಮ್ಮನ ರೂಪವನ್ನು ವರ್ಣಿಸುತ್ತಾ ಮಲಗು ಕಂದಾ ಎಂದು ಹೇಳುವ ದೃಶ್ಯ ಹರಿದಾಸರ 'ಗುಮ್ಮನ ಕರೆಯದಿರೆ ಅಮ್ಮಾ' ಕೀರ್ತನೆಯನ್ನು ನೆನಪಿಸುತ್ತದೆ.

ಸದ್ದು ಸದ್ದೆಲೆ ಕಂದ, ಸುಮ್ಮನಿರು, ಅಳಬೇಡ !
ಕೇಳಿ ಇತ್ತಲೆ ಬರುವನೇನೊ ಗುಮ್ಮ

ಕಣ್ತೆರೆಯದಿರು ಗುಮ್ಮ ಬಂದಾನು' ಮಗುವನ್ನು ನಿದ್ರೆಗೆ ಜಾರಿಸಲು ಅಮ್ಮನ ಯುಕ್ತಿ ಗುಮ್ಮನನ್ನು ಕರೆಯುವುದು. ಆದರೆ ಮಗು ಮಲಗಿದ ಮೇಲೆ ಅಮ್ಮ 'ಬರದಿರೆಲೊ ಗುಮ್ಮ ಕಂದನು ನಿದ್ದೆ ಹೋದ......' ಎಲ್ಲೋ ಯಾವ ಕನಸಿನ ಕೆಳದಿಯಾಡಗೂಡಿ ಆಡುತ್ತಿದೆಯೋ

ಗುಮ್ಮ ಅಲ್ಲಿಯೂ ಕಂದನಂಜಿಸದಿರೆಲೆ '೧೩'

ಎನ್ನುವಲ್ಲಿ ತಾನು ಕರೆದ ಗುಮ್ಮ ಬಂದು ಮಗುವನ್ನು ಹೆಸರಿಸೀತು ಎಂಬ ಕಾತರವಿದೆ.

'ನನ್ನ ಕಂದ' 'ಕೂಸು ಬಿನ್ನಾಣ' ವಾತ್ಸಲ್ಯ ಗೀತೆಗಳಲ್ಲೂ ತನ್ನ ಮಗುವಿನ ಅಂದ-ಚೆಂದ, ಬಾಲ-ಲೀಲೆಗಳ ವರ್ಣನೆ ಕಂಡು ಬರುತ್ತದೆ. ದಟ್ಟ ಅಡಿಯ ಪುಟ್ಟಕಾಲು ಮೇಲೆ ಬಟ್ಟ ತೊಡೆಗಳು' ನನ್ನ ಚಿನ್ನ ನಿನ್ನ ಒರೆಯ ಚಿನ್ನಿ ದೊರೆಯದೆಂದಿಗೂ' ಮುದ್ದುಕಂದ ಎತ್ತಣಿಂದ ಎಂತು ಇಂತು ಬಂದೆಯೋ' ಎಂದು ಪ್ರಶ್ನಿಸುತ್ತಾ ನಮ್ಮ ಮನೆಯ ನಂದದೊಂದು ದೀಪವಾಗಿ ನೀ ಬೆಳಗು ಬಾಳು, ಬದುಕುನಾಳು ಬಳ್ಳಿವಳ್ಳಿ ಹಬ್ಬಲಿ. ನನ್ನ ಹಾಲು ನಿನ್ನಲೊಂದು ಗಂಗೆಯಾಗಿ ಹರಿಯಲಿ ಎಂದು "ನನ್ನ ಹಸುಳೆ ನನ್ನ ಹರುಷದಿಂದ ಹರಸುವೆ" ೧೪ ಎಂಬಲ್ಲಿ ತನ್ನ ಕರುಳ ಕುಡಿ ಬಳ್ಳಿವಳ್ಳಿಯಾಗಿ ಮುಂದುವರಿಯಲಿ ಎಂಬ ಹರಕೆ ಇದೆ. ಮಗುವೇ ತನ್ನ ಗುರು ಎಂದು ತಾಯಿ ಹೇಳುತ್ತಿದ್ದಾಳೆ.

ತೊದಲಾಟ ಒಂದಂದ ತಪ್ಪಡಿಯ ಬಲು ಚಂದ
ನಿನ್ನ ಹಗರಣಕೆ ಇದು ಸಾಜ! ನನ್ನೋಜ
ಕಲಿಸಿದನು ಬಾಲ ನಟರಾಜ
ಹಿಗ್ಗಿನಾ ಸುಳಿ ಹಿಡಿದು ಉಗ್ಗುಗ್ಗಿ ಬರುತಿರುವೆ
ಅರಿದರಿದೊ ರಸಿಕ! ಕಡು ಜಾಣ! ಕಂದಯ್ಯಾ!
ಹಿರಿ ಹಿರಿದೊ ಕೂಸು ಬಿನ್ನಾಣ ! '೧೫'

ಎನ್ನುವ ತಾಯ ಸೋಜಿಗ ಮುಗಿಲ ಮುಟ್ಟಿದೆ ಮಗುವಿನ ಬಾಲಲೀಲೆಯ ವರ್ಣನೆಗೆ ತಾಯಿಗೆಂದು ಸೋಲಿಲ್ಲ. ಮಗು ಅವಳ 'ಓಜ' ನಂತೆ !

ಬೆಳದು ನಿಂತ ಮಗನ ಸ್ವರೂಪವನ್ನು ಕಂಡಾಗ ಗೋಪಿ ವಾತ್ಸಲ್ಯದಿಂದ ರಚಿಸಿದ ಕಾವ್ಯ 'ಚೆಲುವ' ಮುದ್ದಾಗಿ ಕಣ್ತುಂಬವಂತೆ ನಿಂತಿದ್ದ ಮಗುವನ್ನು ಕಂಡು

'ಯಾರವ್ವಾ ಇವ ಚೆಲುವಾ
ತನ್ನಷ್ಟಕ್ಕs'
ತಾನs ನೋಡಿ ನಲಿವಾ ! ೧೬

ಎಂದು ಮಗುವಿನ ಸೌಂದರ್ಯದ ವರ್ಣನೆ ಮಾಡುತ್ತಾಳೆ. 'ಚವತೀ ಚಂದ್ರಮನ' ಹಾಗಿರುವ ಮಗ. ತಾರುಣ್ಯದ ಮೋಹಕ ಚೆಲುವು ತಾಯಿಯ ಮನಸ್ಸಿಗೆ ಮುದ ತಂದಿದೆ. ಆದರೂ ತಾಯ ವಾತ್ಸಲ್ಯದ ಕಣ್ಣಿಗೆ 'ಮೊಲೆಗೂಸು ಇರುವಾಗಿನ ಕಾಮಣ್ಣನೊಲು ಕಾಣಿಸುತ್ತಿದ್ದಾನೆ' ತಾಯ ಕಣ್ಣಿನ ಪ್ರೀತಿಯಲ್ಲಿ ಈ ಚೆಲುವ 'ಗೋಪಾಲ' ನಂತೆ ಕಾಣಿಸುತ್ತಿದ್ದಾನೆ. ಮಕ್ಕಳೊಂದಿಗೆ ಮಗುವಾಗಿ ಆಟವಾಡುವ ಕವಿ ತಮ್ಮ ಕಾಲ್ಪನಿಕ ಜಗತ್ತಿನಲ್ಲಿ ಯಕ್ಷ, ಗಂಧರ್ವ ಕಥೆಗಳನ್ನು ಹೇಳುತ್ತಾ ಮಗುವಿನ ಅಂತರಗವನ್ನು ತಟ್ಟಿದ್ದಾರೆ. ಕನಸಿನ ಲೋಕದಲ್ಲಿ ಪ್ರತಿಮೆಗಳ ಮೂಲಕ ವಿಹರಿಸುವ ರಮ್ಯ ಕಲ್ಪನೆ ಇದೆ

'ಹಾರಗುದುರಿ ಬೆನ್ನ ಏರಿ
ಸ್ವಾರರಾಗಿ ಕೂತು ಹಾಂಗs
ದೂರ ದೂರಾ ಹೋಗೋಣಂತs
ಹಾವಿನಾ ಮರಿಯಾಗಿ ಅಲ್ಲಿ
ನಾವೂನೂ ಹೆಡೆಯಾಡಿಸೋಣು

ಎಂದು ಕಂದನಿಗೆ ಆಹ್ವಾನ ಕೊಡುತ್ತಿದ್ದಾರೆ. ಕನಸಿನೂರಿಗೆ ಹೋಗೋಣ ಬಾ ಎಂದು ನಿದ್ದೆ ಮಾಡಿ ಮೈಯ ಬಿಟ್ಟು ಮುದ್ದು ಮಾಟದ

ಕನಸಿನೂರಿಗೆ

ಸದ್ದು ಮಾಡದೆ ಸಾಗೋಣಂತೇ ೧೭

ಎಂದು ತಮ್ಮ ಭಾವಗೀತೆ 'ಯಾರಿಗೂ ಹೇಳೋಣು ಬ್ಯಾಡ' ದಲ್ಲಿ ವಿವರಿಸುತ್ತಾರೆ.

ಮಗಳ ಬಾಳು ಕಲ್ಯಾಣಕರವಾಗಿರಲಿ ಎಂಬ ಹಾರೈಕೆಯೊಂದಿಗೆ ರಚಿತವಾದ ಕವಿತೆ. 'ಸಂಜೀಯ ಜಾವಿಗೆ' ಮಗಳು ಮಂಗಲೆಯ ಕುರಿತಾದ ಕವನ ಇದು.

ಮಂಗಲೆಯೊಂದಿಗೆ। ಹಿಗ್ಗಾಯ್ತು ತಂದೆಗೆ ॥

ಕುಣಿಸ್ಯಾಡಿ ಕೂಸಿಗೆ। ಅರಳಿಸಿ ಆಸೆಗೆ ॥

ರಾಗದ ಸಾಟಿಗೆ। ತೂಗ್ಯಾದೋ ಧಾಟಿಗೆ ॥

ಒಲಿದಾಡೋ ರೀತಿಗೆ। ಹಾಡ್ಯಾನೋ ಗೀತಿಗೆ ॥

ಸಂಜೀಯ ಜಾವಿಗೆ। ಹೊರಟೀದಿ ಬಾವಿಗೆ ॥

ಭವಿಷ್ಯದ ಬದುಕು ಸುಖವಾಗಿರಲಿ ಎಂಬ ಹಾರೈಕೆಯಲ್ಲಿ ನೀರಿಗೆ ಹೊರಟ ಮಗಳ ಚಿತ್ರಣವಿದೆ.

ಕಳಿಸೋದೆ ನೀರಿಗೆ। ಇಂಥ ಸುಕುಮಾನಿಗೆ ॥

ಚ್ಯಾಬಾವಂಗಾಲಿಗೆ। ಮುಚ್ಚಂದೆ ನಾಲಿಗೆ ॥

ಸಂಜೀಯ ಜಾವಿಗೆ। ಬಂದ್ಯಲ್ಲ ಬಾವಿಗೆ ॥ ಎಂದು ತಾಯಿ ಮಗುವಿನ ಕುರಿತು ಚಿಂತಿಸಿದ್ದಾಳೆ.

ಹಸನಾದ ಧರತಿಗೆ। ಮೆಚ್ಚಿದೆ ಗರತಿಗೆ ೧೮

ಎಂದು ಹೆಮ್ಮೆ ಪಡುತ್ತಿದ್ದಾಳೆ.

ಕವಿ ಬದುಕಿನ ಪಾಡು ಹಾಡಾಗಿ ಹರಿದ ಕೆಲ ಗೀತೆಗಳು ಈ ಸಾಲಿನಲ್ಲಿ ಕಂಡು ಬರುತ್ತವೆ.. ತಮ್ಮ ಒಂಭತ್ತು ಮಕ್ಕಳಲ್ಲಿ ಆರು ಮಕ್ಕಳನ್ನು ಕಳೆದುಕೊಂಡ ಕವಿ. ಪ್ರತಿ ಮಗುವಿನ ಆಟ-ಪಾಟ ಸಾವಿನ ಅಗಲಿಕೆಯ ಕುರಿತ ಪಾಡನ್ನು ಹಾಡಾಗಿಸಿದ್ದಾರೆ. ಕರುಳಿನ ಕುಡಿಗಳ ಹಾಡುಗಳು 'ಕರುಳಿನ ವಚನಗಳೆಂದು ಗುರುತಿಸಿಕೊಂಡಿವೆ. ಚೊಚ್ಚಲ ಮಗು ತೀರಿಕೊಂಡ ನಂತರ ಬರೆದ ಗೀತೆ 'ಅರ್ಪಣ-ತರ್ಪಣ' ಕೊಳಲಾಗಬಹುದಿತ್ತು, ಕಳಿಲಿದ್ದಾಗಲೇ ಕಡಿದ ಕಾಳ ! ಅವ ! ಮಗುವೆಂದು ತಿಳಿದಿದ್ದೆ ಅದಾಯಿತು ನೀರ್ಗುಳ್ಳಿ !

ಮನೆಯವನೆಂದು ತಿಳಿದಿದ್ದೆ ಅವನಾದ ಅತಿಥಿ ! ಕ್ಷಣಿಕವಾಗಿ ಬಂದ ಕೂಸೆ ! ನಿನ್ನಿಂದ ಮಾತೆಯ ಶಾಪದ ಮೂರ್ತಿ ಬಯಲಾಯ್ತು ಎಂದು ದುಃಖಿಸುತ್ತಾರೆ. ಹುಳು ಹುಪ್ಪಡಿಯ ತಿನಿಸಾಯಿತು ಮೋಹದ ಮುದ್ದೆ !' ಎಂದು ಕಂಗೆಡುತ್ತಾರೆ. ಅಟ್ಟಿಸಿಕೊಂಡು ಬಂದ ದುಃಖವನ್ನು ಸ್ವೀಕರಿಸಿ

ಅಜ್ಜಿ ಅಮ್ಮಂದಿರ ಸಮಾಧಾನಕ್ಕಾಗಿ

ನನ್ನ ಮನದ ಸುಮ್ಮಾನಕ್ಕಾಗಿ

ಈ ಕಾವ್ಯ ತಂದುಕೊಟ್ಟ ಮುದ್ದು '೧೯'

ಎಂದು ನುಡಿ ಪ್ರೀತಿಯನ್ನು ತೋರಿದ್ದಾರೆ.

'ಗಿಳಿಯು ಪಂಜರದೊಳಿಲ್ಲಾ' ಕವನದ ಶೀರ್ಷಿಕೆ. ಪುರಂದರ ದಾಸರ ಕೀರ್ತನೆಯನ್ನು ನೆನಪಿಸುತ್ತದೆ.

ಮಲಗಿಸಿದೆ ಮೊಲೆಯೂಡೀ, ಖೋಡೀ,
ನಿದ್ದೆ ಹೋದೆನದೇಕೋ ಪಾಪಿಯು
ಎದ್ದು ಕಣ್ದೆರೆವನಿತರೂಳು ನಾ
ಮುದ್ದು ಕಂದು! ಮುಚ್ಚಿ ಬಿಟ್ಟೆಯೊ ಕಣ್ಣಾ

ಬೇನೆಯಿದ್ದ ಮಗುವನ್ನು ಹಾಲೂಡಿಸಿ ತಾಯಿ ಮಲಗಿದ್ದಾಳೆ. ನಿದ್ದೆ ತಿಳಿದೆದ್ದ ಮೇಲೆ ನೋಡಿದರೆ ಮಗು ಇಲ್ಲ ! ತನ್ನ ಮಗ್ಗುಲಲ್ಲೆ ಇದ್ದ ಮಗು ತನಗರಿವಿಲ್ಲದಂತೆ ಜೀವ ತೊರೆದ ರೀತಿ ತಾಯಿಯನ್ನು ಆಘಾತಕ್ಕೆ ತಳ್ಳಿದೆ. 'ಸಾವು ನುಂಗುತಿರಲು ಎಂತೀ ಜೀವ ಸುಮ್ಮನೆ ಬಿದ್ದು ಕೊಂಡಿತು ಎನ್ನಾ- ಎಂದು ಕಣ್ಣೀರ್ಗರೆಯುತ್ತಾಳೆ. ತಮ್ಮ ವೈಯಕ್ತಿಕ ನೋವಿಗೆ ತಾಯಿಯ ದನಿಯನ್ನು ಕವಿ ನೀಡಿದ್ದಾರೆ. 'ಬಂಗಾರವಿದು ತುಸು ತುಸುವುಹಾ' ಮಾಸಿಲ್ಲವಿನ್ನೂ ಬಣ್ಣಾ' ಎನ್ನುವಲ್ಲಿ ತಾಯಿ ಜೀವ ಮಗುವಿನ ಸಾವನ್ನು ಸ್ವೀಕರಿಸದ ಜೀವ ಮರಗಟ್ಟುವಿಕೆಯ ರೀತಿ ವ್ಯಕ್ತವಾಗಿದೆ. ಮಗು ಕಳೆದ ಸಂದರ್ಭಕ್ಕೆ ಸೃಷ್ಟಿಯಾದ ಶೂನ್ಯತೆಯ ಕುರಿತು ಕವಿಯ ದುಃಖ ಭಾವ ತೀವ್ರತೆಯನ್ನು ಮುಟ್ಟಿದೆ.

ತೆರವು ನನ್ನೀ ಕೈಯೂ, ಮೈಯೂ
ತೆರವು ತೊಡೆ, ತುಟಿ ತೆರವು, ನಾಲಿಗೆ
ತೆರವು, ಕಿವಿಕಣ್ ತೆರವು, ಎದೆಯಿದು
ತೆರವು ಬಾಲಾ! ಮನವೆ ಭಣ ಭಣ ಶೂನ್ಯ!

ಮಗುವಿನಿಂದ ಸಾರ್ಥಕಗೊಂಡಿದ್ದ ಇಂದ್ರಿಯಗಳು ಇಂದೀಗ ಖಾಲಿತನದ ನೋವಿನಿಂದ ಭಣಗುಟ್ಟಿದೆ. ರನ್ನನ ಗದಾಯುದ್ಧದಲ್ಲಿ ಮಗ ಲಕ್ಷಣ ಕುಮಾರನನ್ನು ಕಳೆದುಕೊಂಡ ದುರ್ಯೋಧನನ

"ಗಳಿತ ಶರಮಾಯ್ತು ಹಸ್ತಂ
ಗಳಿತ ರಣೋತ್ಸಾಹಮಾಯ್ತು ಹೃದಯಂ ನಯನಂ
ಗಳಿತಾಶ್ರುವಾಯ್ತು ಕೌರವ
ಕುಳತಿಲಕಂಗಾ ಕುಮಾರನಂ ಕಾಣಲೊಡಂ" ಎಂಬ ವಿಲಾಪ ಇಲ್ಲಿ ಅನುರಣನಗೊಂಡಿದೆ.

ಇಷ್ಟಾದರೂ 'ನಿನ್ನ ನಾಟಕ ನೀನೆ ಬಲ್ಲೆಯೊ ಘನ ಕರುಣ ಸಂಪನ್ನಾ' ೨೦ ಎಂದು ಶಿವ ಕಾರುಣ್ಯವನ್ನು ಅಗಾಧತೆಯನ್ನು ನಮಿಸುತ್ತಿದ್ದಾಳೆ. ಎದೆಯತ್ತರ ಬೆಳೆದ ಮಗ 'ರಾಮ' ತೀರಿಹೋದ ಸಂದರ್ಭದಲ್ಲಿ ರಚಿತವಾದ ಕಾವ್ಯ 'ಪಾಡು' ಮಗನ ಅಗಲಿಕೆ ತಂದೆಯ ಪಾಲಿಗೆ 'ಸಿಡಿಲ ಎರಗಿದ ಮರದ ತೆರದಲಿ' ಇದೆ 'ಯಾವ ಕಾಳನ ಖೂಳ ರಕ್ಕಸರಾರು ಬಂದರೊ ನುಗ್ಗುತ ಚಿಗುರ ಕುಯ್ದರು, ಮಿಡಿಯ ಕಡಿದರು ಹೂವ ಹಿಡಿದರು ಹಿಗ್ಗುತ' ಯಮನಿಗೂ ಚಿಗುರು- ಹೂಗಳೇ ಬೇಕು ಎಂಬ ವಿಷಾದವಿದೆ. ತನ್ನ ಬದುಕಿನಲ್ಲಿ ಬಂದ ಸಾವಿನ ಸರಮಾನೆಯ ಕುರಿತು ಕವಿ ಮತ್ತೆ ಎಲ್ಲಾ ನೆನಪಲ್ಲಿ ನರಳುತ್ತಾನೆ. ! ತಮ್ಮದಿರ ನಾ ಕಳೆದುಕೊಂಡಿದ್ದೆ. ಕಳೆದುಕೊಂಡಿಹೆ ತಾಯಿಯ ಎಳೆಯ ಗಳೆಯರ ಕಳವಿನಲಿ ನಾ ಕಳೆದೆ ಜೀವನ ಮಾಯೆಯ ಎಲ್ಲಿಯೋ ಅಡಗಿತ್ತು ಕಾಲನ ಹೊಟ್ಟೆಯಲಿ ಈ ಲೆಕ್ಕವು ನಿನ್ನ ಮರಣದ ನೆವಕೆ ಮರುಕಳಿಸಿಹುದು ಮುಂಚಿನ ದುಃಖವು" ಮಗನ ಸಾವು! ಹಾಡಿನಂಜಲಿ ಬೇಡುವೆನು ವಿಯೋಗಕೆ?! ೨೧

ಎನಿಸಿಬಿಟ್ಟಿದೆ. ಈ ಖಂಡಕಾವ್ಯ ೨೦ ವರ್ಷದ ಮಗನ ವಿಯೋಗದಿಂದ ರಚಿತವಾದದ್ದು. 'ಲಲಿತಾ' 'ಪ್ರೇಮಾ' ಹಾ! ಆನಂದಾ! ಶೋಕಗೀತೆಗಳು ತಮ್ಮ ಮಕ್ಕಳ ಸಾವಿಗಾಗಿ ಪರಿತಪಿಸಿ ಬರೆದಿದ್ದು. ತನ್ನ ದುಃ

ಖವೇ ದುಃಖವಲ್ಲ. ತನ್ನ ಗೆಳೆಯರು ಕಳೆದುಕೊಂಡ ಮಕ್ಕಳಿಗಾಗಿ ಪರಿತಪಿಸುವ ಜೀವ ಮತ್ತಷ್ಟು ಶೋಕಗೀತೆಗಳನ್ನು ರಚಿಸಿತು.

'ಬೇರೊಬ್ಬರ ಮಕ್ಕಳಿಗಾಗಿ', 'ಹೊನ್ನಮ್ಮ' 'ಹಾ! ಸರು; ಕಥೆಯಾದಲು ಹುಡುಗಿ' 'ಕನ್ಯಾರತ್ನ' ಗಳು ಇಂತಹ ಗೀತೆಗಳೇ. ಮಗಳು ಲಲಿತಾ ತೀರಿಹೋದ ಸಂದರ್ಭಕ್ಕೆ ಪತ್ನಿ ಲಕ್ಷ್ಮೀಬಾಯಿ ದುಃಖತಪ್ತ ನೋಟದಿಂದ ನೋಡಿದ ಆ ಗಳಿಗೆಯನ್ನು 'ನೀ ಹೀಂಗ ನೋಡಬ್ಯಾಡ ನನ್ನ'ಕಾವ್ಯದಲ್ಲಿ ಹಂಚಿಕೊಂಡಿದ್ದಾರೆ. ಮಗುವನ್ನು ಕಳೆದುಕೊಂಡ ತೀವ್ರ ದುಃಖ ತಾಯನ್ನು ಕಂಗೆಡಿಸಿ ಪತಿಯನ್ನು ಆತ್ಮದೃಷ್ಟಿಯಿಂದ ನೋಡಿದ ಸಂದರ್ಭ ಶ್ರೇಷ್ಠ ಭಾವಗೀತೆಯಾಗಿ ಮೂಡಿ ಬಂದಿದೆ.

ದಾಂಪತ್ಯದ ನಾನಾ ನೆಲೆಗಳಲ್ಲಿನ ಪ್ರೇಮದ ಆವಿಷ್ಕಾರ ಪುತ್ರ-ಪುತ್ರಿಯರ ಶೋಕಗೀತೆಗಳಲ್ಲಿ ಮೂಡಿ ಬಂದಿದೆ. ತಮ್ಮ ತೀವ್ರವಾದ ನೋವನ್ನು -ವೈಚಾರಿಕತೆಗೆ ಬದಲಾಯಿಸಿದ ಸತ್ವ ಕವಿಯ ಕಾವ್ಯದಲ್ಲಿ ಹೊರ ಹೊಮ್ಮಿದೆ.

'ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೇ

ನೀಡುವೆನು ರಸಿಕ ನಿನಗೆ!

ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ

ಆ ಸವಿಯ ಹಣಿಸು ನನಗೆ ಎಂದು 'ಎನ್ನ ಪಾಡೆನಗಿರಲಿ' ಕವನದಲ್ಲಿ ಸಹೃದಯರ ಮಡಿಲಿಗೆ ಹಾಡನ್ನು ಇತ್ತಿದ್ದಾರೆ ಕವಿ ಬೇಂದ್ರೆ.

**೫:೫. ಸ್ನೇಹ ಗೀತೆಗಳು**

ಒಂದು ಜನ್ಮದಲ್ಲಾ ಗೆಳೆತನದ ಸಾಧನೆ
ಜನ್ಮ ಜನ್ಮಕ್ಕುಂಟು ಹೊಸತು ತನು '೧'

ಎಂದು ಬಾಲ್ಯಕಾಂಡದಲ್ಲಿ ನೆನಪಿಸಿಕೊಳ್ಳುವ ಕವಿಗೆ ಗೆಳೆತನ ಎನ್ನುವುದು ಅತ್ಯಮೂಲ್ಯೆನಿಸಿತ್ತು. ಬೇಂದ್ರೆಯವರು ಪ್ರೀತಿಯ ಬಹುಮುಖ ಶೋಧನೆಯನ್ನು ಮಾಡಿದ್ದಾರೆ. ಈ ಶೋಧನೆಯ ತಿರುಳಾಗಿ 'ಸ್ನೇಹ' ಸೃಷ್ಟಿಯಾಗಿದೆ. ಪುಣೆಯಲ್ಲಿದ್ದ 'ಶಾರದಾ ಮಂಡಲಿ' ಹಾಗೂ ಅಮೆರಿಕದ ಬ್ರುಕ್ ಫಾರ್ಮನಲ್ಲಿದ್ದ 'ಬುದ್ಧಿ ಜೀವಿಗಳ ಗುಂಪು ಇವರಿಗೆ ಗೆಳೆಯರ ಬಳಗವನ್ನು ಹುಟ್ಟು ಹಾಕಲು ಪ್ರೇರೇಪಿಸಿತು. ಸಮಾನ ಮನಸ್ಕರ ಈ ಗುಂಪು ಸಾಹಿತ್ಯ ಚರ್ಚೆ, ನಾಡಹಬ್ಬದ ಆಚರಣೆ, ಸಾಹಿತ್ಯ ಪತ್ರಿಕೆಗಳ ಪ್ರಕಟಣೆ, ಇತ್ಯಾದಿ ಸೃಜನಶೀಲ ಕೆಲಸಗಳಲ್ಲಿ ತೊಡಗಿಸಿಕೊಂಡಿತು. ಸಾಹಿತ್ಯಾಸಕ್ತರ ಈ ಸಂಘಟನೆ. ಬೇಂದ್ರೆ ಅವರ ವೈಯಕ್ತಿಕ ಹಾಗೂ ಸಾಹಿತ್ಯಕ ಬದುಕಿನ ಮೇಲೆ ತೀವ್ರವಾದ ಪ್ರೇಹಣೆ ಹಾಗೂ ಪೋಷಣೆಯನ್ನು ಮಾಡಿತ್ತು. ಗಂಭೀರ ಸ್ವರೂಪದ ಈ ಸಂಘಟನೆ 'ಗೆಳೆಯರ ಗುಂಪು' ಎಂಬ ಹೆಸರಿನಲ್ಲಿ ಸಾಹಿತ್ಯದ ಕೆಲಸಗಳಲ್ಲಿ ತಮ್ಮನ್ನು ರೂಢಿಸಿಕೊಂಡಿತು. ಈ ಗುಂಪಿನ ಗೆಳೆತನಕ್ಕೆ ಭಾವನಾತ್ಮಕ ನೆಲೆಯೂ ಇತ್ತು. ಗೆಳೆಯರ ಗುಂಪಿನಲ್ಲಿದ್ದ ಯಾರೇ ಸಾಹಿತ್ಯ ಕುರಿತಾದ ಕೃತಿಗಳನ್ನು ಕವಿತೆಗಳನ್ನು ರಚಿಸಿದರೆ ಅದು ಗುಂಪಿನ ಹೆಸರಲ್ಲಿ 'ಪ್ರಕಟ'ವಾಗುತ್ತಿತ್ತು.

ನಾನು ಬಾಯಿ, ನೀನು ಕಿವಿ
ಬಾನ ಕಡಲಲ್ಲಿ ತೇಲಿ ಬಿಟ್ಟೆ ಈ ನುಡಿ ದೋಣಿ
ನಿನ್ನ ಹೃದಯದ ಬಂದರದ ಮುಟ್ಟೀತು
ನಿನ್ನ ಬುದ್ಧಿಯ ಮನೆಯ ಕಟ್ಟೀತು

ನೀನೆಲ್ಲೇ ಇರು. ಕೇಳುವ ಸೂತ್ರ ಸರಿ ಇರಲಿ
ಹೃದಯ ತೆರೆದಿರಲಿ '೨'

ಎಂಬ ವಿನಂತಿ ಬೇಂದ್ರೆ ತಮ್ಮ ಗೆಳೆಯಲ್ಲಿ ಮಾಡಿಕೊಂಡಿದ್ದರು. ಸಾಹಿತ್ಯ ಮತ್ತು ಜೀವನಗಳ ಸಾಮೂಹಿಕ ಸಾಧನೆಯ ಕೇಂದ್ರವಾಗಿ 'ಗೆಳೆಯರ ಗುಂಪು' ಕೆಲಸ ಮಾಡಿತು. 'ಧಾರವಾಡ'ದಲ್ಲಿ ಪ್ರಾರಂಭವಾದ ಈ ಗೆಳೆಯರ ಗುಂಪಿಗೆ ಹುಬ್ಬಳ್ಳಿ, ಕೊಪ್ಪಳ, ಹಲಸಂಗಿ ಕಡೆಯಿಂದ ಹಿರಿಯ-ಕಿರಿಯ ಆಸಕ್ತರು ಸೇರಿಕೊಂಡರು, 'ಜಯಕರ್ನಾಟಕ' ಸ್ವಧರ್ಮ ವಾಗ್ಭೂಷಣ, ಮೊದಲಾದ ಪತ್ರಿಕೆಗಳ ಮೂಲಕ ಸ್ವಾತಂತ್ರ್ಯ ಪೂರ್ವದ ವಿಚಾರಗಳನ್ನು ಚರ್ಚೆಮಾಡಿತು. ಪತ್ರಿಕಾ ಧರ್ಮ, ಆಧ್ಯಾತ್ಮಿಕ ವಿಚಾರಗಳ ಚರ್ಚೆ, ದೇಶೀ ಸತ್ವ ಇತ್ಯಾದಿಗಳ ಕುರಿತು ಪತ್ರಿಕೆಯಲ್ಲಿ ವಿಚಾರ-ವಿಮರ್ಶೆಗಳು ನಡೆದವು. ಪಂಪೋತ್ಸವ, ವಿದ್ಯಾರಣ್ಯೋತ್ಸವ, ರವೀಂದ್ರೋತ್ಸವ ಮುಂತಾದ ಉತ್ಸವಗಳಿಗೆ ಒತ್ತು ನೀಡುವ ಮುಖಾಂತರ ಸಾಹಿತ್ಯ ಉತ್ಸವಗಳನ್ನು ಆಚರಿಸಿತು. ಸಾಹಿತ್ಯಕ, ಸಾಂಸ್ಕೃತಿಕ ಕ್ಷೇತ್ರಗಳ ಕಮ್ಮಟದಂತೆ ಇದು ಯಶಸ್ವಿಯಾಯಿತು. ಮಧುರ ಚೆನ್ನ, ಚಿದಂಬರ, ಶಂಕರಗೌಡರು, ಆನಂದ ಕಂದ, ಸಿಂಪಿ ಲಿಂಗಣ್ಣ, ಸಾಲಿ ರಾಮಚಂದ್ರರಾಯರು, ಮುಗಳಿ, ಗೋಕಾಕ್, ಸಿದ್ಧವನಹಳ್ಳಿ ಕೃಷ್ಣಶರ್ಮ, ಚುಳುಕಿ, ಪ್ರಹ್ಲಾದ ನರೇಗಲ್ಲ, ಕೃಷ್ಣಕುಮಾರ್, ಅಕ್ಕಿ ಬಸಣ್ಣ, ಸಂಭಾ, ಕಾಪಸೇ, ರಂಗಪ್ಪ ಪೋದ್ದಾರ, ಪಾರ್ಶ್ವವಾಡರು ಈ ಗುಂಪಿನ ಗೆಳೆಯರು "ಶಿಕ್ಷಕನಾಗಿ ಶಿಕ್ಷಣಕ್ಕಿಂತ ವಿದ್ಯಾರ್ಥಿಗಳ ಸಂಪರ್ಕ ಪ್ರೀತಿಯಿಂದ ಸಾಲೆ ಸೇರಿ ಎಳೆಯರು ಗುಂಪನ್ನೂ ಗೆಳೆಯರ ಗುಂಪನ್ನೂ ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ - ದೈವ ಪುರುಷದ ಹೆಣಿಗೆಯಾಗಿ ಹೆಣೆದುಕೊಂಡೆ '3'

೧೯೩೩ರಲ್ಲಿ ಈ ಗೆಳೆಯರ ಗುಂಪು ಚದುರಿಕೊಂಡಿತು. ಆ ಗೆಳೆಯರ ಗುಂಪಿನ ಒಲುಮೆ - ನಲುಮೆಗಳು ಅವರ ಜೀವನದುದ್ದಕ್ಕೂ ಮಾಸದ ನೆರಳಾಗಿತ್ತು. ಅವರ ಸ್ನೇಹದ ಅಖಂಡ ಸ್ಮರಣೆ ಅನೇಕ ಕಾವ್ಯಗಳಾಗಿ ಹೊರ ಹೊಮ್ಮಿದವು. ತಮ್ಮ ವಿದ್ಯಾರ್ಥಿಗೆಳೆಯ 'ಚಿದಂಬರ ಸಗರ' (ಹಿರಿಯಪುತ್ರ ಕ್ಷೇಮೇಂದ್ರನ ಜೊತೆಯವನು) ತೀರಿಕೊಂಡಾಗ 'ಮೈತ್ರಿಯಲಿ ದೈವ ಬೇಡಿದ ಮೊದಲ ಆಹುತಿ ಅವನದು' ಎಂದು ನೊಂದುಕೊಳ್ಳುತ್ತಾರೆ. ಅವರ ಸ್ನೇಹ ವರ್ತುಲಕ್ಕೆ ಸಿಲುಕಿದ ಗೆಳೆಯರು. ಗೆಳೆಯರ ಸ್ನೇಹ ಗೆಳೆಯರ ಸಾವು, ಗೆಳೆಯರ ಮಕ್ಕಳ ಸಾವು ಭಾವಗೀತೆಗಳಾಗಿ ಪುನಃ ಸೃಷ್ಟಿ ಹೊಂದಿದ್ದಾರೆ. ಸ್ನೇಹದ ಪರಿಕಲ್ಪನೆಯನ್ನು ತಮ್ಮ ಕಾವ್ಯದ ಪೋಷಕ ಸತ್ವಗಳಲ್ಲಿ ಒಂದಾಗಿ ಬಳಸಿಕೊಂಡರು. ಅವರ 'ಸಖೀಗೀತದಲ್ಲಿ ಗೆಳೆಯರ ಕುರಿತಾದ ಪ್ರಸ್ತಾಪಗಳು ಅಲ್ಲಲ್ಲಿ ಕಂಡು ಬರುತ್ತವೆ. ಗೆಳೆಯರ ಮೈತ್ರಿಯ ಕುರಿತು 'ಸಹೃದ'ಕವಿತೆಯಲ್ಲಿ ಹೀಗೆ ಹೇಳುತ್ತಾರೆ.

ಎಲೆ ಸುಹೃದ, ಸರ್ವ ಭೂತಾಂತರ ಸ್ಥನೆ, ನರನ
ನಾರಾಯಣನೆ, ನಿನ್ನ ಮೈತ್ರಿಯ ಉಗಾಭೋಗ
ಉಸಿರು ಈ ಹಕ್ಕಿಯಲಿ, ತುಂಬು ಜೀವನ ದೇವ,
ಯುಗ ಜುಗದ ಪರಿ ಪಾಕದಿಂದ ಬರಲಿರುವಂಥ,
ಸ್ನೇಹ ಸಾರದ ಹದವನರಿವೆವೆ? '೪'

ತಮ್ಮೊಳಗಿನ ಸ್ನೇಹ ಸಾರಗಳು ಶಾಶ್ವತವಾಗಿರಲಿ. ಆ ಪವಿತ್ರಾತ್ಮವಾದ ಸ್ನೇಹ ಸಾಗರವು "ಹಿಮಾಲಯದ ಮಾನಸ ಸರೋವರದ ಗಂಗೆ ಕಲಕಿದುದುಂಟೆ?"ಎಂದಿಗೂ ಇಲ್ಲ ಎಂಬ ಆತ್ಮನಂಬುಗೆಯೊಂದಿಗೆ ಬದುಕಿದ್ದಾರೆ. ನಾರಾಯಣನಲ್ಲಿ ಹೃದಯವಂತಿಕೆಯನ್ನು ಸ್ನೇಹಶಕ್ತಿಯನ್ನು ದಯಪಾಲಿಸು ಎಂದು ಬೇಡಿಕೊಳ್ಳುತ್ತಾರೆ. ಹಿಮಾಲಯದ ಗಂಗೆಯಂತೆ ಗೆಳೆತನ ನಿರ್ಮೂಲ ಹಾಗೂ ಪವಿತ್ರವಾಗಿರಲಿ ಎಂಬ ಆಶಯ ಇಲ್ಲಿದೆ. ತಮ್ಮ

ಆಪ್ತ ಗೆಳೆಯ ಮಧುರ ಚೆನ್ನರೊಡನೆ ಬೇಂದ್ರೆಯವರಿಗಿದ್ದ ಗೆಳೆತನದ ಪ್ರೇಮದಲ್ಲಿ ರಚಿತವಾದ ಒಂದು ಕವಿತೆ 'ಹರಕೆ'. ಗೆಳೆಯರಿಬ್ಬರ ಜೀವನ-ಧ್ಯೇಯಗಳು ಈ ಕಾವ್ಯದಲ್ಲಿ ಒಡಮೂಡಿದೆ. ಇಪ್ಪತ್ತು ಸಂವತ್ಸರಗಳನ್ನು ಮುಗಿಸಿದ ಮಧುರ ಚೆನ್ನದ ಹುಟ್ಟುಹಬ್ಬಕ್ಕೆಂದು ೨೦ ನುಡಿಗಳಲ್ಲಿ ಬರೆದ ಶುಭ ಮಂಗಲ ಗೀತ ಇದು.

"ಎರೆಯುವೆನು ಬಾ ನಿನ್ನ, ನಮ್ಮ ಪಟ್ಟದ ಮರಿಯೆ
ಸಕಲ ತೀರ್ಥದ ಕ್ಷೀರ ತಂದು,
ಬೆರಗಾಗಿ ಬೆರೆತು ಆ ಶಿವನಲ್ಲಿ ದೇವನಲಿ *ಪಡೆದಪ್ಪನಾಗು" ಎಂದು ಹಾರೈಸುತ್ತಾ
"ಗುರುವಂ ಮರೆಯ ಬೇಡೈ ಗೆಳೆಯಾ ! ಗುರು ಬಂಧುವೆ!
ಅರುಹಂ ತೊರೆಯ ಬೇಡೈ ಒಲವೇ! ಸ್ನೇಹಸಿಂಧುವೇ || '೫'
ನನ್ನ ನಿನ್ನ ನೋಟ ಮಾತ್ರ ಎರಡು ದಿಕ್ಕಿಗೆಳೆದಿದೆ.
ಬೇರೆ ಹಾದಿ ತುಳಿದಿದೆ" -"ಚೆನ್ನ"

ನಮ್ಮಿಬ್ಬರ ಜೀವನಕ್ಕೂ ಮಹಾ ಪ್ರೇರಣೆಯಾಗಿ ನಿಂತ ಶಕ್ತಿ ಒಂದೇ, ಆದರೂ ನಮ್ಮ ದೃಷ್ಟಿ ಎರಡು ದಿಕ್ಕಿನಲ್ಲಿ ಹರಿಯುತ್ತವೆ ಎಂದು ಸ್ಪಷ್ಟಗೊಳಿಸುತ್ತಾರೆ. 'ಅನೇಕ ಬೀಜದ ಏಕಫಲವು ಆಗಿರು'ವಂತೆ ನನ್ನ ನಿನ್ನ ಗೆಳೆತನ ಏಕ ಬಂಧವಾಗಿರಲಿ ಎಂದು ಬಯಸುತ್ತಾರೆ. ಇಂತಹ ಗೆಳೆಯ ದೇಹವಿಟ್ಟಿದ್ದನ್ನು ತಿಳಿದು ಹೊರ ಹೊಮ್ಮಿತ ಶೋಕಗೀತೆ 'ಚೆನ್ನಲಿಂಗವೇ'.

ಮಾತಾಡೋ ಮಾತಾಡೋ ಲಿಂಗವೇ
ಮಾತಾಡಲೊಲ್ಲೇಕೋ ಲಿಂಗವೇ
ಮಾತಿನ ತಾಯಾದ ಮೌನದ ಬಸುರಲಿ
ಹೂದೆಯಾಹೇ ಚೆನ್ನಲಿಂಗವೇ '೬'

ಎಂಬು ದುಃಖಿಸುತ್ತಾರೆ ಮಧುರ ಚೆನ್ನರನ್ನು 'ಚೆನ್ನಲಿಂಗವೇ' ಎಂದು ಸಂಬೋಧಿಸುವ ಸ್ನೇಹ ತೇಜಸ್ಸು ಅವರದ್ದು. 'ನನ್ನ ಚೆನ್ನ ನಿನ್ನಗೆಣೆಯ ಗೆಣೆಯರಾರಿಹರು ಅವನೆ ಅವನಿಗು ಹೆಚ್ಚು ಅವನಿಗಿಂತ" ಎಂದು ಹಾಡಿ ಬೇಂದ್ರೆಯವರು ತಮ್ಮೀರ್ವರ ಸ್ನೇಹಕ್ಕೆ ಶಾತ್ವದ ಮುದ್ರೆಯನ್ನು ಒಪ್ಪಿದ್ದಾರೆ. ತಾವು 'ನರಬಲಿ' ದೇಶ ಭಕ್ತಿ ಗೀತೆಯನ್ನು ಬರೆದು, ಸೆರೆಮನೆಯಲ್ಲಿದ್ದು, ಮುಂದೆ ನಿರುದ್ಯೋಗಿಗಳಾಗಿ ಬೇಸತ್ತಾಗ ಎಂ.ಎ. ವ್ಯಾಸಂಗಕ್ಕೆ ಪುಣೆಗೆ ಹೋಗುತ್ತಾರೆ. ಅಲ್ಲಿ ಸಿಕ್ಕ ಗೆಳೆಯರ ಸ್ನೇಹ ಹುರುಪನ್ನು 'ಸಖೀಗೀತ' ದಲ್ಲಿ ಪ್ರಸ್ತಾಪಿಸುತ್ತಾರೆ.

'ಎಳೆ ಗೆಳೆಯರೊಡನಾಟ ಅಲ್ಲೆ ದೊರಕಿತ್ತೆನಗೆ
ಮತ್ತೊಮ್ಮೆ ಮುಂದೊಮ್ಮೆ ನನಗಾದೊಲು
ಹರೆ ಮರಳಿ ಬಂದಂತೆ ಹುರಿದುಂಬಿ ತೆನ್ನದೆ
ಅವರ ಸಮಸ್ಯೆಗೆ ಸಮರಸನು '೭' ಆದೇ

ತಮ್ಮ ಗೆಳೆಯರ ಗುಂಪು ಚೆದುರಿ ಹೋದಾಗ ದುಃಖಿಸುವ ಸಂದರ್ಭವೂ ಪ್ರಾಸಂಗಿಕವಾಗಿ ಮೂಡಿ ಬಂದಿದೆ. ಬಂದು ಕೊನೆಗೊಮ್ಮೆ ಬರುವಂಥ ಕಾಳ ರಾತ್ರಿಯ ಬಂದು

ಹಗಲಿಗೆ ಇರುಳನು ಹೊದೆಯಿಸಿತು
ತಳಪಾಯ ಅದುರಿತು, ಕೆಲಸವು ಕೆದರಿತು. ಗೆಳೆತನ ಮುದುರಿತು
ಮನ ಬೆದರಿತು. ಹನ್ನೆರಡು ವರುಷದ ತಪ ವಿಫಲವಾಯಿತೋ |

ನಿಂತಂಥ ನೆಲವೆಲ್ಲಾ ನೀರಾಯಿತೋ! '೯'

ಎಂಬಲ್ಲಿ ಅವರ ವೈಯಸ್ಸಿನ ಬದುಕಿನ ಸ್ನೇಹ ಸಾರಗಳು ಕಾವ್ಯದಲ್ಲಿ ದಾಖಲೆಯಾಗಿ ಉಳಿದು ಬಂದಿರುವುದನ್ನು ಕಾಣಬಹುದು.

ಬೇಂದ್ರೆ ಅವರ ಆಪ್ತ ಗೆಳೆಯರಲ್ಲಿ ಶಂಕರಗೌಡರು ಶ್ರೀ ಮಾತಾರವಿಂದರ ದರ್ಶನ ಮಾಡಿಸಿದ್ದರು. ಎಂದೇ ಆ ಗೆಳೆಯನಿಗೆ ಬಾಳಿನಲ್ಲಿ ಕೈ ಹಿಡಿದು ನಡೆಸಿದಿರಿ ಜೊತೆಯ ಅಣ್ಣಗಳನು / ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು ಹೆಣ್ಣುಗರುಳಿನಲಿ ತೂಗಿ ನೋಡಿದಿರಿ ಹೊನ್ನು ಮಣ್ಣುಗಳನು ಎಂದು ಕೃತಜ್ಞತೆ ಸಲ್ಲಿಸಿದ್ದಾರೆ.

'ರಾಮಾ ರಾಮಾ' ಎಂಬ ಮತ್ತೊಂದು ಸ್ನೇಹ ಸೂಕ್ತದಲ್ಲಿ ವಿನೀತ ರಾಮಚಂದ್ರ ರಾಯರನ್ನು ನೆನೆದಿದ್ದಾರೆ. ಭಾವ ಪೂರ್ಣವಾದ ಈ ಕವಿತೆಯಲ್ಲಿ ತಮ್ಮ ಎಳೆಯ ಗೆಳೆಯನೊಂದಿಗೆ ಇದ್ದ ಮಮತೆಯನ್ನು ಕರುವಿಗೆ ಹೋಲಿಸಿದ್ದಾರೆ. ಹಸು ಕರುವಿನ ಸಂಬಂಧ ತನಗೂ -ರಾಮನಿಗೂ ಇತ್ತೆಂಬ ಸೂಚನೆ ಇದೆ. ತಮ್ಮ ಸಮಕಾಲೀನರಾದ ಅನೇಕ ಗೆಳೆಯರನ್ನು ಕುರಿತು 'ಕಾವ್ಯ ನಮನ' ವನ್ನು ಸಲ್ಲಿಸಿದ್ದಾರೆ. ತಮ್ಮ ಗೆಳೆಯರ ಅಗಲಿಕೆಯ ಕುರಿತಂತೆಯೂ ಬೇಂದ್ರೆ ಕಾವ್ಯ ತರ್ಪಣ ನೀಡಿದ್ದಾರೆ.

'ನಾನಾ' ಹೋದನೋ! ಹೋದನೋ ? ಅವನ ಬೆನ್ನೇ ಚೆನ್ನನೂ ಹೋದನೋ?
'ನಾ', 'ನೀ' ಎನ್ನದ ಶ್ರೀಧರಂ ವ್ಯಥೆಯೊಳೇ ತಾನೀಗಳೇನಾದನೋ?" '೯' (ಶ್ರೀಧರ ತರ್ಪಣ)

'ಅಂಬಾ -ಜಾತನ ಅಶ್ರು ಸಂಚಿತದೊಳೇ ಆ ಶ್ರೀರಂಗರ್ಪಣಂ' ಹಿರಿಕಿರಿಯರೆನ್ನದೆ ಗೆಳೆಯರೊಂದಿಗೆ ಹೊಂದಿ ಬೆರೆಯುತ್ತಿದ್ದ ಕವಿಗೆ ಗೆಳೆತನದ ವಿಶ್ವಾಸ ಬದುಕಿನ ಅನನ್ಯಭಾಗವಾಗಿತ್ತು. ಒಲವಿನ ನಾನಾ ಮುಖಗಳಲ್ಲಿ 'ಗೆಳೆತನ'ವೂ ಒಂದು. ಇಬ್ಬರೂ ಒಂದೇ ನೆಲೆಯಲ್ಲಿ ನಿಂತು ಒಬ್ಬನ್ನೊಬ್ಬರು ಪೂರ್ಣವಾಗಿ ಅರಿತುಕೊಂಡು ಪರಸ್ಪರ ಪ್ರೀತಿಸುವ ಈ ಸ್ನೇಹ ಸಂಬಂಧ ನಿರ್ವ್ಯಾಜವಾದದ್ದು.

## ಅಡಿ ಟಿಪ್ಪಣಿ

### ೫.೧ ದಾಂಪತ್ಯಪೂರ್ವ ಪ್ರಣಯಗೀತೆಗಳು

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧. ಕುಲಕರ್ಣಿ ಎನ್ಕೆ | ದ.ರಾ.ಬೇಂದ್ರೆ | ನವಕರ್ನಾಟಕ ಪ್ರಕಾಶನ ಬೆಂಗಳೂರು. ೨೦೦೧ (ಪು.೨೯) |
| ೨. ವಾಮನಬೇಂದ್ರೆ (ಸಂ) | ಅಂಬಿಕಾತನಯ ದತ್ತರ ಸಮಗ್ರ ಕಾವ್ಯ ವಿಕಾಸ (ಸಂ.೩) | ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೪೩, ೪೪) |
| ೩. ವಾಮನಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ (ಪು.೨೧೪, ೨೧೪) |
| ೪. ಅದೇ | | (ಪು.೨೨೧, ೨೨೨) |
| ೫. ಅದೇ | | (ಪು.೫,೬) |
| ೬. ಅದೇ | | (ಪು.೪) |
| ೭. ಅದೇ | | (ಪು.೬) |
| ೮. ಅದೇ | | (ಪು.೨೨, ೨೩) |
| ೯. ಅದೇ | | (ಪು.೭) |
| ೧೦. ಅದೇ | | (ಪು.೧೫) |
| ೧೧. ಅದೇ | | (ಪು.೧೮) |
| ೧೨. ಅದೇ | | (ಪು.೩೩) |
| ೧೩. ಅದೇ | | (ಪು.೧೯೨) |
| ೧೪. ಅದೇ | | (ಪು.೧೯೭) |
| ೧೫. ಅದೇ | | (ಪು.೨೧೩) |
| ೧೬. ಅದೇ | | (ಪು.೨೧೫) |
| ೧೭. ಅದೇ | | (ಪು.೨೧೬) |
| ೧೮. ಅದೇ | | (ಪು.೧೯೯, ೨೦೦) |

೫.೨ ದಾಂಪತ್ಯ ಗೀತೆಗಳು

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧. ವಾಮನಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೨೦೦೩ (ಪು.೧೨೯) |
| ೨. ಅದೇ | | (ಪು.೧೩೨, ೧೩೩) |
| ೩. ಅದೇ | | (ಪು.೧೩೩) |
| ೪. ಅದೇ | | (ಪು.೧೩೫) |
| ೫. ವಾಮನಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ಸಿದ್ಧಾಂತ ಸಂ.೬ | ವರಕವಿ ಡಾ. ದ.ರಾ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೧೦) |
| ೬. ವಾಮನಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೧೯೯೮ (ಪು.೧೭೫) |
| ೭. ಅದೇ | | (ಪು.೨೦೧, ೨೦೨) |
| ೮. ಅದೇ | | (ಪು.೧೯, ೨೦, ೨೧) |
| ೯. ಅದೇ | | (ಪು.೬೦,೬೧) |
| ೧೦. ಅದೇ | | (ಪು.೨೧೩) |
| ೧೧. ಅದೇ | | (ಪು.೧೮೫, ೧೮೬, ೧೮೭) |
| ೧೨. ಅದೇ | | (ಪು.೫೯, ೬೦) |
| ೧೩. ಅದೇ | | (ಪು.೨೩, ೨೪) |
| ೧೪. ಅದೇ | | (ಪು.೬೮, ೬೯, ೭೦) |
| ೧೫. ಅದೇ | | (ಪು.೧೮೨, ೧೮೩) |
| ೧೬. ಅದೇ | | (ಪು.೮೧, ೮೨) |
| ೧೭. ಅದೇ | | (ಪು.೧೨೪, ೧೨೫) |
| ೧೮. ಅದೇ | | (ಪು.೮೨, ೮೩, ೨೫) |
| ೧೯. ವಾಮನಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂ.೩ | ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೧೨೭) |

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೨೧. ಅದೇ | | (ಪು.೧೨೯, ೧೩೦) |
| ೨೨. ಅದೇ | | (ಪು.೧೩೫, ೧೩೭) |
| ೨೩. ಅದೇ | | (ಪು.೧೩೪) |
| ೨೪. ಅದೇ | | (ಪು.೧೪೩) |
| ೨೫. ವಾಮನಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೧೯೯೮ (ಪು.೪೬) |
| ೨೬. ಅದೇ | | (ಪು.೧೩) |
| ೨೭. ಅದೇ | | (ಪು.೫೨, ೫೩) |
| ೨೮. ಅದೇ | | (ಪು.೧೭೪) |
| ೨೯. ವಾಮನಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿನ್ಯಾಸ ಸಂ.೪ | ವರಕವಿ ಡಾ. ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ ಹುಬ್ಬಳ್ಳಿ ೨೦೦೩ (ಪು.೧೫೮) |
| ೩೦. ವಾಮನಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೧೯೯೮ (ಪು.೬೭) |

**೫.೩ ವಿರಹ ಗೀತೆಗಳು**

| | | |
|---|---|---|
| ೧. ವಾಮನಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೨೦೦೩ (ಪು.೧೬) |
| ೨. ಅದೇ | | (ಪು.೫೦, ೫೧) |
| ೩. ಅದೇ | | (ಪು.೨೦೪,೨೦೫) |
| ೪. ವಾಮನಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ನಮುನ ಸಂ.೧ | ವರಕವಿ ಡಾ. ದ.ರಾ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೨೪೯) |
| ೫. ಅದೇ | | (ಪು.೨೫೧) |
| ೬. ಅದೇ | | (ಪು.೨೬೪) |
| ೭. ಅದೇ | | (ಪು.೨೭೧) |
| ೮. ಅದೇ | | (ಪು.೨೭೨) |
| ೯. ಅದೇ | | (ಪು.೨೭೪) |

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧೦. ಅದೇ | | (ಪು.೨೭೫) |
| ೧೧. ಅದೇ | | (ಪು.೨೭೮) |
| ೧೨. ಅದೇ | | (ಪು.೨೮೧) |
| ೧೩. ಅದೇ | | (ಪು.೨೮೫೬) |
| ೧೪. ಅದೇ | | (ಪು.೨೮೬) |
| ೧೫. ವಾಮನಬೇಂದ್ರೆ (ಸಂ) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೨೦೦೩ (ಪು.೪೮) |
| ೧೬. ಅದೇ | | (ಪು.೪೭, ೪೮) |
| ೧೭. ಅದೇ | | (ಪು.೬೫, ೬೬) |
| ೧೮. ಅದೇ | | (ಪು.೫೬) |
| ೧೯. ಅದೇ | | (ಪು.೫೩) |

| ೫.೪ ವಾತ್ಸಲ್ಯ ಗೀತೆಗಳು | | |
|---|---|---|
| ೧. ವಾಮನಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ಸಿದ್ಧಾಂತ ಸಂ.೩ | ವರಕವಿ ಡಾ. ದ.ರಾ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೨, ೯) |
| ೨. ಅದೇ | | (ಪು.೨೨೨) |
| ೩. ಅದೇ | | (ಪು.೨೩೯) |
| ೪. ಅದೇ | | (ಪು.೨೨೬) |
| ೫. ಅದೇ | | (ಪು.೨೨೯, ೨೩೦) |
| ೬. ಅದೇ | | (ಪು.೨೩೩) |
| ೭. ಅದೇ | | (ಪು.೨೩೨) |
| ೮. ಅದೇ | | (ಪು.೨೩೧) |
| ೯. ಅದೇ | | (ಪು.೨೨೩) |
| ೧೦. ಅದೇ | | (ಪು.೨೨೮) |
| ೧೧. ಅದೇ | | (ಪು.೨೪೧) |
| ೧೨. ಅದೇ | | (ಪು.೨೪೨) |
| ೧೩. ಅದೇ | | (ಪು.೨೧೬) |

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧೪. ಅದೇ | | (ಪು.೧೮೧, ೧೮೨) |
| ೧೫. ಅದೇ | | (ಪು.೧೮೫, ೧೮೬) |
| ೧೬. ಅದೇ | | (ಪು.೧೮೩, ೧೮೪) |
| ೧೭. ಅದೇ | | (ಪು.೧೬೫, ೧೬೬) |
| ೧೮. ಅದೇ | | (ಪು.೧೯೫, ೧೯೬) |
| ೧೯. ಅದೇ | | (ಪು.೧೬೩, ೧೬೪) |
| ೨೦. ಅದೇ | | (ಪು.೧೭೭, ೧೭೮) |
| ೨೧. ಅದೇ | | (ಪು.೧೬೭, ೧೭೪) |
| ೨೨. ವಾಮನಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ದರ್ಶನ ಸಂ.೩ | ವರಕವಿ ಡಾ. ದ.ರಾ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೨೭) |

## ೫.೫ ಸ್ನೇಹ ಗೀತೆಗಳು

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧. ಅಮೂರ ಜಿ.ಎಸ್. | ಭುವನದ ಭಾಗ್ಯ | ಪ್ರಿಯಾದರ್ಶಿನಿ ಪ್ರಕಾಶನ ಬೆಂಗಳೂರು ೧೯೯೬ (ಪು.೬೯) |
| ೨. ಬುದ್ಧಣ್ಣ ಹಿಂಗಮಿರೆ (ಸಂ.) | ಇಳಿದು ಬಾ ತಾಯಿ | ಸಾಹಿತ್ಯ ಮಂಟಪ, ಹುಬ್ಬಳ್ಳಿ, ೧೯೭೭ (ಪು.೨೫೦) |
| ೩. ದ.ರಾ. ಬೇಂದ್ರೆ | ಸಾಹಿತ್ಯ ವಿರಾಟ್ ಸ್ವರೂಪ | ಸಮಾಜ ಪುಸ್ತಕಾಲಯ, ಧಾರವಾಡ ೧೯೭೪ (ಪು.೯೧) |
| ೪. ವಾಮನ ಬೇಂದ್ರೆ (ಸಂ.) | ಅಂಬಿಕಾತನಯದತ್ತ ಸಮಗ್ರ ಕಾವ್ಯ ದರ್ಶನ ಸಂ.೨ | ಡಾ. ದ.ರಾ.ಬೇಂದ್ರೆ ಸಂಶೋಧನಾ ಕೇಂದ್ರ, ೨೦೦೩ (ಪು.೩೭) |
| ೫. ಅದೇ | ಸಂ. ೩ | (ಪು.೩೩೨, ೩೩೫) |
| ೬. ಅದೇ | | (ಪು.೩೩೦) |
| ೭. ಅದೇ | | (ಪು.೧೧೧) |
| ೮. ಅದೇ | | (ಪು.೧೧೪) |
| ೯. ಅದೇ | | (ಪು.೨೪೭) |

# ಅಧ್ಯಾಯ ೬

# ಸಖೀಗೀತ

ಸಖೀಗೀತ ಬೇಂದ್ರೆ ಅವರ ಕೌಟುಂಬಿಕ ಗೀತೆಗಳಲ್ಲಿ ಬಹು ಮುಖ್ಯವಾದದು. ಸಖಿ ಹಾಗೂ ಸಖರ ನಡುವೆ ನಡೆದ ದಾಂಪತ್ಯದ ಸುಖ, ದುಃಖ ವಿರಸ-ವಿಷಮತೆಗಳ ಚಿತ್ರಣವನ್ನು ಕವಿ ಇಲ್ಲಿ ಬಣ್ಣಿಸಿದ್ದಾರೆ. ಗಂಡ-ಹೆಂಡತಿಯರ ನಡುವೆ ನಡೆಯುವ ಸಂಘರ್ಷಗಳ ವಿವರಗಳು ಸಖೀಗೀತದಲ್ಲಿ ಕಂಡು ಬರುತ್ತದೆ. ಸಾಹಿತ್ಯ, ಗೆಳೆಯರ ಸಂಗ, ಕನ್ನಡದ ಪ್ರೀತಿ, ಸೆರೆವಾಸಗಳಂತಹ ಸಾಮಾಜಿಕ ಸಂಬಂಧಗಳ ನಡುವೆ, ವೈಯಕ್ತಿಕ ಸಮಸ್ಯೆಗಳನ್ನು ಮರೆಯುತ್ತಿದ್ದರು. ಆದರೆ ಪತ್ನಿಗೆ ಕೌಟುಂಬಿಕ ಬದುಕಿನ ನೋವಿನ ವಿಷಣ್ಣತೆ ದಾಂಪತ್ಯದ ಸರಸದಿಂದ ವಿಮುಖಳನ್ನಾಗಿಸಿತ್ತು. ಬದುಕಿನ ಬಗೆಗಿನ ವೈರುಧ್ಯದ ಗ್ರಹಿಕೆ ಸಖ-ಸಖಿಯರ ನಡುವೆ ಭಿನ್ನಾಭಿಪ್ರಾಯವನ್ನು ಮೂಡಿಸುತ್ತದೆ. ಈ ವಿಷಮತೆಗಳ ಬಗ್ಗೆ ಸಖೀಗೀತದಲ್ಲಿ ಪ್ರಸ್ತಾಪಗಳಿವೆ.

ಬೇಂದ್ರೆ ತಮ್ಮ 'ಸಖೀಗೀತ' ಶೀರ್ಷಿಕೆಯ ದಾಂಪತ್ಯ ಗೀತೆಯ ಕುರಿತು ಹೀಗೆ ಹೇಳಿಕೊಳ್ಳುತ್ತಾರೆ. "ನನ್ನ ಪತ್ನಿ ಲಕ್ಷ್ಮೀಬಾಯಿ ಸಖೀಗೀತದ ನಾಯಿಕೆ. ಅವಳ ಜನ್ಮ ೧೨-೪-೧೯೦೬, ನನ್ನೊಂದಿಗೆ ವಿವಾಹವಾದಾಗ ಅವಳ ವಯಸ್ಸು ೧೩. ನನ್ನೊಂದಿಗೆ ೪೩ ವರ್ಷದ ಸಫಲ ದಾಂಪತ್ಯ ಜೀವನವನ್ನು ಸಾಗಿಸಿದಳು. ನನ್ನ ವೈವಾಹಿಕ ದಾಂಪತ್ಯ ಜೀವನವನ್ನು ಸಾಗಿಸಿದಳು. ನನ್ನ ವೈವಾಹಿಕ ಜೀವನದ ಸಿಂಹಾವಲೋಕನ ಮಾಡುವ ಪ್ರೇರಣೆ ಉಂಟಾಯಿತು. ಹೊಸ ಧಾಟಿ ಸ್ಫುರಿಸಿತು. ಆ ಧಾಟಿಯ ಸೊಗಸಿಗಾಗಿ ನನ್ನ ಅನುಭವ ಚರ್ವಣೆಯನ್ನು ಮಾಡಿದೆ. ಸಖೀಗೀತ ಹುಟ್ಟಿಕೊಂಡಿದ್ದು ಹೀಗೆ"೧ ದಾಂಪತ್ಯದಲ್ಲಿ ನೂರು ರೀತಿಯ ನೋವುಗಳು ಬಂದು ಅವರನ್ನು ಅಪ್ಪಳಿಸುತ್ತದೆ. ಅನೇಕ ನೋವಿನ ಘಟನೆಗಳು ಅವರ ಪ್ರೇಮದ ಮನೆಗೆ ಘಾಸಿಯುಂಟು ಮಾಡುತ್ತದೆ. ಅಂತಹ ಕಷ್ಟ-ನಷ್ಟಗಳನ್ನು ಮೀರಿ ಪ್ರೇಮ ಸಶಕ್ತವಾಗಬೇಕು ಎನ್ನುವುದು 'ಸಖೀಗೀತ'ದ ನಿಲುವಾಗಿದೆ. ಎರಡು ಜೀವಗಳ ದೈಹಿಕ ಕಾಮನೆಯನ್ನು ಮೀರಿದ ಪ್ರೇಮ ಪರಿಪುಷ್ಟವಾಗಲು ಕಷ್ಟಗಳ ಬೆಂಕಿಯಲ್ಲಿ ನರಳಬೇಕು. ಆಗ ಕಾಮ ಪುಟಕ್ಕಿಟ್ಟ ಬಂಗಾರವಾಗಿ ಪ್ರೇಮ ರೂಪವನ್ನು ಹೊಂದುತ್ತದೆ ಎನ್ನುವುದೇ ಕವಿಯ ಆಶಯವಾಗಿದೆ.

ಬೇಂದ್ರೆಯವರ ಕಾವ್ಯದ ಶಕ್ತಿ ಹೆಣ್ಣು, ಹೆಣ್ಣಿನ ಬಗ್ಗೆ, ಅವಳ ಪ್ರೀತಿಯ ಬಗೆಗಿನ ನಾನಾ ಮುಖಗಲನ್ನು ಕಾವ್ಯವನ್ನಾಗಿಸಿದ ಕವಿ ಬೇಂದ್ರೆ 'ಐದು ಐದೆಯರ ಮಗ' ಅವರ ಮಾತೃಭಕ್ತಿ ಅಮೋಘವಾದದ್ದು, ಅಪಾರವಾದದ್ದು, ವಿಶ್ವಮಾತೆ, ಧಾರವಾಡದ ಮಾತೆಯೊಂದಿಗೆ, ಪ್ರಕೃತಿ ಮಾತೆಯ ಕುರಿತ ಗೌರವ ಅಪರಿಮಿತವಾಗಿ ಕಾವ್ಯ ಮುಖೇನ ವರ್ಣಿಸಲ್ಪಟ್ಟಿದೆ. ತಾಯಿ, ಸತಿ-ಸಖಿ, ಪ್ರಣಯಿ, ಮಗಳು ಹೀಗೆ ಹೆಣ್ಣಿನ ವಾತ್ಸಲ್ಯ ಧಾರೆಯನ್ನು ಕಾವ್ಯದಲ್ಲಿ ಹರಿಸಿದ್ದಾರೆ. ಪತ್ನಿಯೊಂದಿಗಿನ ವೈವಾಹಿತ ಸಾಂಗತ್ಯದ ವಿವರವನ್ನು ಸಖೀಗೀತದಲ್ಲಿ ವಿವರಿಸಿದ್ದಾರೆ. ಸಖೀಗೀತದಲ್ಲಿ ಕವಿ ಬದುಕಿನ ವೈಯಕ್ತಿಕ ವಿವರ ಮಾತ್ರವಲ್ಲದೆ. ಸಾಹಿತ್ಯ, ಸಂಸ್ಕೃತಿ ಹಾಗೂ ಸಾಮಾಜಿಕ ವಿವರಗಳು ಪ್ರಸ್ತಾಪಗೊಂಡಿವೆ. ಕವಿ ಮನೋಧರ್ಮದ ಒಂದು ಭಾಗವಾಗಿ ಸಖೀಗೀತ ಮೂಡಿ ಬಂದಿದೆ.

"ಈ ಗೀತದಲ್ಲಿ ನನ್ನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖ-ದುಃಖದ ಹಂಬನ್ನು ಹಬ್ಬ ಬಿಟ್ಟಿದ್ದೇನೆ. ಪಾಶ್ಚಿಮಾತ್ಯರ ಪ್ರಣಯಲೀಲೆಯ ಕೊನೆಗೆ ಬರುವ ಮಧುವೆಯಲ್ಲಿ ವಿಯೋಗದ ಲಕ್ಷಣವು, ವಿರಹದ ಚಿತ್ರಣವು, ಪ್ರೇಮದ ಸಮಾಧಿಯು ಕಟ್ಟಿ ಹೋಗಿದ್ದುಂಟು. ನಮ್ಮಲ್ಲಿ ವಿವಾಹಪೂರ್ವ ಪ್ರಣಯದ

ಸಂಚಾರಿಭಾವಗಳಿಗೆ ಎಡೆಯಿಲ್ಲ. ಪಾಶ್ಚಿಮಾತ್ಯರ ಸರಸವು ವಿರಸದ ಪ್ರಸ್ತಾವನೆ. ನಮ್ಮ ರಸವೇ ನೀರಸ. ಹೀಗೆ ಸಾಮಾನ್ಯವಾಗಿ ತೋರಿದವರೂ ಹಿಂದೀಯರ ವೈವಾಹಿಕ ಜೀವನವೇ ಸಂಸ್ಕಾರವಂತರ ಮನೆಗಳಲ್ಲಿ ಜೀವಮಾನದುದ್ದಕ್ಕೂ ಪ್ರಣಯ ಪರಿಪಾಕದ ರೀತಿಯಾಗಿಯೇ ಇದೆ. ಅಗ್ನಿಸಾಕ್ಷಿಯಾಗಿ, ದಾನವಾಗಿ ಬಂದ ಕನ್ನೆಯನ್ನು ಸ್ನೇಹದ ಅಭ್ಯಾಸದಿಂದ, ಸುಖದುಃಖಗಳಲ್ಲಿ ಸಮಭಾಗಿಯಾಗುವ ಸಹಾನುಭೂತಿಯ ಅಂತಃ ಕರಣದಿಂದ ಸಖಿಯನ್ನಾಗಿ ಮಾಡುವ ಕ್ರಮವೊಂದು ಎಡಬಿಡದೆ ಸಾಗಿರುವುದು ಆಶ್ರಮದಲ್ಲಿ ಸ್ನೇಹದ ವಿವಿಧ ರೂಪಗಳೂ ತಮ್ಮ-ತಮ್ಮ ಪಾತ್ರವನ್ನಾಡಿ ನಾಯಕ ಪಾತ್ರಕ್ಕೆ ರಸಭಾವಗಳ ಪ್ರಭಾವಲಯವನ್ನು ಕಟ್ಟುವವು. ಅಂತಹ ಚಿತ್ರವೊಂದು ಸಖೀಗೀತದಲ್ಲಿದೆ"೨ ಎಂದು ಸ್ವತಃ ಕವಿ ಬೇಂದ್ರೆ ಅವರೇ ಹೇಳಿಕೊಂಡಿದ್ದಾರೆ.

"ಬೇಂದ್ರೆ ಸಖೀಗೀತದಲ್ಲಿ ಗಂಡು-ಹೆಣ್ಣಿನ ಪರಿಪೂರ್ಣತೆಯನ್ನು ಕಂಡರಿಸಿರುವುದು ವಿವಾಹದ ಚೌಕಟ್ಟಿನಲ್ಲಿ, ಮಧುವೆಯ ಒಳಗಡೆ ಗಂಡು-ಹೆಣ್ಣುಗಳು ತಮ್ಮ ವ್ಯಕ್ತಿತ್ವವನ್ನು ಪಕ್ವವಾಗಿಸಿಕೊಳ್ಳುತ್ತಾರೆ. ಉನ್ನತ ಮೌಲ್ಯಗಳ ಕಡೆಗೆ, ಅನುಭವದ ವಿಶೇಷದ ಕಡೆಗೆ ನಡೆಯುತ್ತಾರೆ. ಈ ದೃಷ್ಟಿಯಿಂದ ಮಾನವೀಯ ಸತ್ವದಿಂದ ತುಂಬಿದ ಉದಾತ್ತ ವಾತಾವರಣದಲ್ಲಿಯೇ ಸಾಂಸ್ಥಿಕ ಕೊಡುಗೆಯಾಗಿ ಬಂದ ಪತ್ನಿ ಸಖಿಯಾಗುತ್ತಾಳೆ. ಸಾಂಸ್ಥಿಕ ಸಂಬಂಧವೊಂದು ವೈಯಕ್ತಿಕ ಅಧಿಕೃತ ಸಂಬಂಧವನ್ನಾಗಿ ರೂಪುಗೊಳ್ಳುವ ಈ ಕ್ರಿಯೆಯೇ ಸಖೀಗೀತದ ಸತ್ವ."೩

ಸಖೀ ! ನಮ್ಮ ಸಖ್ಯದ ಆಖ್ಯಾನ ಕಟು ಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೆ ?
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ ? '೪'

ಎಂದು ತಮ್ಮ ದಾಂಪತ್ಯ ಬದುಕಿನ ಮಧುರ ವ್ಯಾಖ್ಯಾನವನ್ನು ತಿರು ತಿರುಗಿ ಹಾಡುವ ಬಯಕೆ ಕವಿಯದ್ದು. ತನ್ನ ಬದುಕಿನೆಲ್ಲಾ ಸಂಬಂಧದ ತೊಡಕುಗಳನ್ನು ಬಿಡಿಸಿಕೊಂಡು ಹೀಗೆ ಹಾಡಲು ತೊಡಗುತ್ತಾರೆ.

ಪಟ್ಟ ಪಾಡೆಲ್ಲವೂ ಪುಟ್ಟು ಹಾಡಾಗುತಾ
ಹೊಸದಾಗಿ ರಸವಾಗಿ ಹರಿಯುತಿದೆ ! '೫'

ತನ್ನ ವೈವಾಹಿಕ ಬದುಕಿನಲ್ಲಿ ತಾನನುಭವಿಸಿದ ನೋವು-ಕಷ್ಟ-ಗಳನ್ನೆಲ್ಲಾ ಕಾವ್ಯಧಾರೆಯಾಗಿ ಹರಿಸಿದ್ದಾರೆ. ಬದುಕಿನ ಸುದೀರ್ಘ ಪಯಣದಲ್ಲಿ ಕಷ್ಟ ನಿಷ್ಠೂರಗಳು ಅದೆಷ್ಟೋ.

ಸಪ್ಪೆ ಬಾಳುವೆಗಿಂತ ಉಪ್ಪುನೀರೂ ಲೇಸು
ಬಿಚ್ಚು ಸ್ಮೃತಿಗಳ ಹಾಯಿ ಬೀಸೋಣ ಬಾ. ಎನ್ನುತಾ
ಬೀಸೋಣ, ಈಸೋಣ, ತೇಲೋಣ ಮುತ್ತಿನ
ತವರ್ಮನೆ ಮುಟ್ಟನು ಮುಳುಗೋಣ ಬಾ '೬'

ಎಂದು ಜೊತೆಗಾತಿಯನು ಆಹ್ವಾನಿಸುತ್ತಿದ್ದಾನೆ. ಅವರ ಬದುಕೆನುದ್ದಕ್ಕೂ ಸುಖದ ಬಾಳುವ ಅವರಿಗಾಗಿ ಕಾದಿರಲಿಲ್ಲ.

ತಾಂಡ ನಡೆಸಿದ ಝುಂಝಾವಾತದ
ಕಾಲಿನ ಹುಲ್ಲುಗೆಜ್ಜೆ ನಾವಾಗಿರೆ '೭'

ಈ ಸಾಲುಗಳು ಸಖ-ಸಖಿಯ ಅವಸ್ಥೆಯ ಧಾರುಣವತೆಯನ್ನು ಎತ್ತಿ ತೋರಿಸುತ್ತಿವೆ. ಕಷ್ಟ-ನಿಷ್ಠುರಗಳ ಬದುಕೇ ಸಖ್ಯದ ಬಂಧವನ್ನು ಗಟ್ಟಿಗೊಳಿಸುತ್ತಿದೆ. ಸುಖ-ದುಃಖಗಳ ಸಂಕಷ್ಟದ ಬಾಳುವೆಯ ನೆನಹನ್ನು

ನನಗೂ ನಿನಗೂ ಅಂಟಿದ ನೆಂಟನ್ನು
ಕೊನೆ ಬಲ್ಲವರಾರು ಕಾಮಾಕ್ಷಿಯೇ ! '೮' ಎಂದು ಮತ್ತೆ ಮತ್ತೆ ನೆನಪಿಸಿಕೊಳ್ಳುತ್ತಾರೆ.
ಮಂದಿವಾಳದ ಸಂದಣಿಯಲ್ಲಿ
ಅಂತಃಪಟದಾಚೆ ವಿಧಿ ತಂದ ವಧು ನೀನು
ಮಾಲೆಯ ಸಾವರಿಸಿ ನಿಂತಿದ್ದೀಯೆ.
'ಜೀವದ ಭೂಮಿ ನೀ ಮರಿಮಕ್ಕಳನ್ನು ಪಡೆದು
ಮನೆತನ ಮುಂದುವರಿಸ ಬಂದಿರುವೆ. '೯'

ಎನ್ನುತ್ತಾ ಸತಿಯನ್ನು ತನ್ನ ವೈಯಕ್ತಿಕ ಬದುಕಿಗೆ ಆಖ್ಯಾನಿಸಿಕೊಳ್ಳುತ್ತಾನೆ. ತನ್ನ ಮನೆತನವನ್ನು ಮುಂದುವರಿಸಲು ಬಂದ ಹೆಣ್ಣಿಗಾಗಿ ಅವನಲ್ಲಿ ಕೃತಜ್ಞತೆಯ ಭಾವನೆ ಹುಟ್ಟುತ್ತದೆ. ಸಖಿಯಾದವಳು ತನ್ನ ತನು, ಮನ, ಧನಗಳಲ್ಲಿ ಪಾಲು ಬೇಡಲು ಬಂದವಳಲ್ಲ. ಅವುಗಳನ್ನು ಸಮೃದ್ಧಗೊಳಿಸಲು ಬಂದವಳು. ಪತಿ-ಪತ್ನಿಯ ಸಹಭೋಗಗಳಲ್ಲಿ ಸ್ಪಂದಿಸಿದವಳು. ಕಷ್ಟದಲ್ಲಿ ಪಾಲುದಾರಳಾಗಿ ನಿಂತು ಒಂಬತ್ತು ಮಕ್ಕಳಲ್ಲಿ ಮೂವರನ್ನು ಮಾತ್ರ ಉಳಿಸಿಕೊಂಡು ಬಡತನವನ್ನೇ ಬದುಕಾಗಿಸಿಕೊಂಡ. 'ಲಕ್ಷ್ಮೀದೇವಿ'ಗಾಗಿ ಸಖೀಗಿತ ಸೃಷ್ಟಿಸಿದ್ದಾರೆ. ಬೇಂದ್ರೆಯವರ ಸಖೀಗೀತ ಕಾವ್ಯಕ್ಕೆ ಸಂಪನ್ನಳಾದ ಸಖಿಯೇ ನಾಯಕಿಯಾಗಿದ್ದಾಳೆ.

ಬೇಂದ್ರೆಯವರ ದಾಂಪತ್ಯ ಗೀತೆಗಳಲ್ಲಿ ಅವರ ಬಾಳಿನುದ್ದದ ಪ್ರೇಮ ವ್ಯಾಖ್ಯಾನ, ಪಟ್ಟಪಾಡು, ಸಾಧನಕೇರಿಯ ಋತುವಿಲಾಸಗಳ ವಿವರ ಸಿಗುತ್ತದೆ. ಸತಿಯಾದವಳು ಸಖಿಯಾಗಿರುವ ಹಂತದಲ್ಲಿ.

ಹಗಲೆಲ್ಲೋ ಹಾರಿದವು ಇರುಳೆಲ್ಲಾ ಜಾರಿದವು
ಋತು ನಿದ್ದೆಮಾಡಿದವು ಬಗರೆಯೊಲೇ '೧೦' ಎನಿಸುತ್ತದೆ.

ಸಂಭ್ರಮದ ಬದುಕಿನಲ್ಲಿ ಅತ್ತೆಯ ಸೊಸೆ, ಮುದ್ದು ಚೊಚ್ಚಿಲ ಬಸಿರಿ ಆದರೆ, ಮೊದಲಿನ ಫಲ ಮಣ್ಣಿಗೆ ಮೀಸಲಾಯಿತು.ಮಗುವಿನ ಮರಣದ ಆಘಾತಕ್ಕೆ ತಾಯಿಗಿಡದ ಮಾಯೆ ಬರಸಿಡಿಲಿನಂತೆ ಎರಗಿತ್ತು. 'ಮರುಚಲ ಬಸಿರಿ'ಯ ಬಯಕೆ ನೆಲೆ ತಪ್ಪಿದ ಹಕ್ಕಿಯಂತಾಯಿತು.

ಬಾಳಿನ ಬೆಂಕಿಗೆ ಮೈಬೆಂದು ಮನನೊಂದು
ಒಲುಮೆಯ ಒಲುಮೆಯ ಕುಲುಮೆಯಿಂದಲೇ
ತಾಳಿಕೆ ಬರುವಂಥ ಉಕ್ಕಾಗಿ ಬರುತಿದೆ '೧೧'

ಬದುಕಿನ ಬವಣೆ ಒಲುಮೆಯ ಒಲುಮೆಯಲ್ಲಿ ಕಣ್ಣೀರಲಾಗ ತೊಳೆಯುತ್ತಿರೆ. ತನ್ನ ಕಾಮಾಕ್ಷಿಯೊಂದಿಗಿನ ಬದುಕಿನ ನಂಟು ಬಲವಾಗುತ್ತದೆ.

ವೈಯಕ್ತಿಕ ಬದುಕನ್ನು ಮೀರಿದ ಸಾಮಾಜಿಕ ಬದುಕು ಕವಿಯ್ನು ಕರೆದಿದ್ದರೆ ಫಲವೇ ಮುಂದೆ ಕನ್ನಡದ ಕೂಗಿಗೆ ಮನ್ನಣೆ ನೀಡುತ್ತಾರೆ. ಪತಿಯ ಬದುಕು ತನಗಾಗಿ ಮಾತ್ರವಲ್ಲ, ಕವಿಧರ್ಮದ ಪಾಲನೆ-ಕನ್ನಡದ ಪ್ರೇರಣೆ ಸಖನ ವಿರಹವನ್ನು ಸಹಿಸಲು ಕಲಿಸುತ್ತದೆ. ಸಾಹಿತ್ಯ ಸೇವೆಯಲ್ಲಿ ಮೈಮರೆಯುವಂತೆಯೇ ಸಾಧನಕೇರಿಯ ಋತುವಿಲಾಸ, ಸಾಹಿತ್ಯ ರಚನೆಯಲ್ಲಿ ತೊಡಗಿಸಿತು. ಕವಿ ತನ್ನ ಸಖಿಯೊಂದಿಗಿನ ಗೀತೆಯನ್ನು ಹಾಡುತ್ತಾ ಮಲೆನಾಡಿನ ಸೆರಗಿನ ನೆರೆಗಿದ್ದ ಮನೆಯನ್ನು ನೆನಪಿಸಿಕೊಳ್ಳುತ್ತಾರೆ. ಚಿಕ್ಕಪ್ಪ ಬಂಡೊ ಪಂತರು

ಕಾಣಿಕೆಯಾಗಿ ಕೊಟ್ಟ ಧಾರವಾಡದ ಸಾಧನಕೇರಿ' ಯ 'ಶ್ರೀಮಾತಾ' ದಲ್ಲಿನ ವಾಸ್ತವ್ಯಕ್ಕೆ ಜೊತೆಗೂಡಿದ ಪ್ರಕೃತಿ ಮಾತೆಯ ಚಲುವನ್ನು ವರ್ಣಿಸುತ್ತಾರೆ. ಸತತವಾಗಿ ದೂರ ಹೋದ ಹುಟ್ಟಿದ ಮಕ್ಕಳು, ತಾಯಿ ಅಂಬಿಕೆ, ಬಡತನಗಳ ಸಂಕಷ್ಟದ ನಂತರ ಒದಗಿದ ತನ್ನ ಭಾಗ್ಯವನ್ನು ಬೇಂದ್ರೆಯವರು.

ಸುಖ ತಾನು ಬರುವಾಗ ಗುಳೆ ಎತ್ತಿ ಬರುವುದು.

ಒಂದಲ್ಲ ಎರಡಲ್ಲ ಪರಿವಾರವೆ '೧೨'

ಎಂಬ ವರ್ಣನೆಯಲ್ಲಿ ಕೊಂಡಾಡುತ್ತಾರೆ. ಅವರ ಸುಖಕ್ಕೆ ನಿಸರ್ಗದೇವಿಯು ಜೊತೆಯಾದ ಸಂಭ್ರಮ ಕವಿಯ ಬದುಕಲ್ಲಿ ಸಂಭ್ರಮ ಹೆಚ್ಚಿಸುತ್ತದೆ.

ಇರುಳವಳು ಹಗಲವಳು ಬೆಳಕು-ನೆಳಲಿನವಳು

ಬೆಳದಿಂಗಳವಳು ನಮ್ಮವಳಾದಳು

ಗಿಡ ಮರದ ತೂಗಾಟ ಹಸುಹಕ್ಕಿ ಕೂಗಾಟ

ಚಿನ್ನಾಟ ನನ್ನಾಟ ಒಂದಾದವು '೧೩'

ಜೀವನದಲ್ಲಿನ ಸಮೃದ್ಧತೆಯನ್ನು ವಸಂತಾಗಮನಕ್ಕೆ ಹೋಲಿಸುತ್ತಾರೆ. ಋತುಗತಿಯ ವರ್ಣನೆ, ಋತು ಸಂಹಾರದ ವಿವರಕ್ಕೆ ಸಾಧನಕೇರಿಯೇ ಮೂಲವಾಗುತ್ತದೆ. ಪ್ರಕೃತಿಯ ಚೆಲುವು-ಒಲವುಗಳ ಅನ್ಯೋನ್ಯತೆಯನ್ನು ಕವಿ ಹೀಗೆ ಗುರುತಿಸುತ್ತಾರೆ.

ಇದಿರಿಗೆ ಚೆಲುವಾಗಿ ಇದುವ ತಾನೆನುವಾಗ

ಒಲವಾಗಿ ಒಳಗಿನಿಂದ ಹೊಮ್ಮುತ್ತಿದೆ '೧೪'

ಗಂಡಿಗೆ ಹೊರ ಬದುಕಿನ ಒಡನಾಟ ವೈಯಕ್ತಿಕ ಕಹಿಯನ್ನು ಮರೆಸುತ್ತದೆ. ಸಾಹಿತ್ಯ, ಕಾವ್ಯ, ಗೆಳೆಯರ ಬಳಗಗಳ ಸಾಮೂಹಿಕ ಸ್ನೇಹ ಕವಿ ಬೇಂದ್ರೆಯವರ ಒಲುಮೆಯನ್ನು ಮರೆಸಿತು. ಆದರೆ ಪತಿಯ ಒಡನಾಟವಿಲ್ಲದ ಹೆಣ್ಣಿಗೆ ಬದುಕು ಸಹ್ಯವೆನಿಸದೇ ದುರ್ಭೇದ್ಯವಾದ ಮೌನದಲ್ಲಿ ಅಡಗುತ್ತಾಳೆ. 'ಸಪ್ಪನೆಯ ಬದುಕಿಗೆ ನೀ ಹೇಸಿದೆ' ಎನ್ನುವ ಕವ ಪತ್ನಿ ಹಾಗೂ ಮಾಗಿ ಕಾಲದ ಪ್ರಕೃತಿಯ ಸ್ಥಿತಿಯನ್ನು

ಮೈತಾಗಿ ಮನಬಾಗಿ, ಒಳಿದಾತಾಗಿ, ಇಂಬಾಗಿ

ನಾವಾಗಿ, ಮಾಗಿಗೊಳಗಾಗಿರ

ಕೊಡುಕೊಳೆ ಎಂಬುದು ಇಮ್ಮುಖದಲ್ಲಿ ಕೂಡ

ಒಮ್ಮುಖವೆಂಬಂತೆ ಆಗುತಿದೆ ! '೧೫' ಎಂದು ವಿಷಾಧಿಸುತ್ತಾರೆ.

ಬದುಕಿನ ಯಾವುದೇ ವಿಷಮತೆಗೂ ಎದೆಗುಂದದ ಕವಿ ಸಖಿಯ ನಿರುತ್ಸಾಹಕ್ಕೆ ನೋಯುತ್ತಾನೆ 'ಕುಣಿಯೋಣು ಬಾ ಎಂದು ಪ್ರಣಯದೋಲೆಯನಂದು ಎದೆಮಾತಿನಿಂದೆದೆಗೆ ಅಟ್ಟಿದರೂ ಆಕೆ. 'ಮಾತಿಗೂ ಮೌನಕ್ಕೂ ಬಗೆತನ ' ಬೆಳಸಿದ್ದಾಳೆ', 'ನೀರಿಗೂ ಕಲ್ಲಿಗೂ ಏನು ಜೊತಿ 'ಮೌನಮುದ್ರೆ'ಯ ತೊಡನೆ ತ್ಯಜಿಸಿ ಬಾರೆ 'ಹೇ ಪ್ರೇಮದೇವತೆ' ಎಂದು ಅಂತರ್ಮುಖಿಯಾದ ಗೆಳತಿಯನ್ನು ಕರೆಯುತ್ತಿದ್ದಾನೆ.

ನನಗೂ ನಿನಗೂ ಅಂಟಿದ ನಂಟಿನ

ಕೊನೆ ಬಲ್ಲವರಾರು ಕಾಮಾಕ್ಷಿಯೇ !

ಈ ದಾಂಪತ್ಯದ ಸಂಬಂಧ ನನ್ನೊಂದಿಗಿನ ನೀನಷ್ಟೇ ಎನ್ನುತ್ತಾರೆ.

ಮಾತಿನಲ್ಲಿರುವಂಥ ಮೌನದ ಧ್ವನಿಯಿಂದ
ವಿವ್ಹಲತೆ ಬೆಳೆಯುವುದಿಬ್ಬರಲಿ
ಇಬ್ಬರ ಮನವಾಗ ಇಬ್ಬಗೆಯಾಗುವುದು
ಒಬ್ಬಗೂ ಸುಖವಿಲ್ಲ ಬದುಕಿನಲ್ಲಿ'೧೬' ಸಖಿಬಾರೆ ಪ್ರಣಯದ 'ವಾಣಿಯ ವೀಣಾ ತಂತಿಯಂತೆ ಗುಂಗುಣಿಸೋಣ' ಎಂದು ಪರಿ-ಪರಿಯಿಂದ ಓಲೈಸುತ್ತಾನೆ. ಮೌನವೇ ಬದುಕಾಗಿ ವಿಮುಖಳಾದ ಸಖಿಯ ಪರಿಗೆ ಅಚ್ಚರಿಗೊಳ್ಳುತ್ತಾನೆ.

'ನನ್ನ ಚಿತ್ತದೊಳಿರುವ ಚಿತ್ರಗಾರನು ಬರೆದ ಚಿತ್ರಕ್ಕೆ ಬಹುದೆಂದೊ ಜೀವಕಳೆ' ಎಂದು ಪ್ರಶ್ನಿಸಿಕೊಳ್ಳುತ್ತಿದ್ದಾನೆ. ಅಗ್ನಿಸಾಕ್ಷಿಯಾಗಿ ಕೈಹಿಡಿದು ಬಂದ ಸಖಿಯ ದುಃಖವನ್ನು ಶಮನಗೊಳಿಸಲು ಪ್ರಯತ್ನಿಸುತ್ತಾನೆ. ದುಃಖ ವಿಷಮತೆಗಳ ನಡುವಲ್ಲೂ ಅವರು, ಮೋಹನದಾಸನ ಉಸಿರಿಗೆ ಬೀಸಿದ ಬಿರುಗಾಳಿಯಲ್ಲಿ' ಸಿಲುಕಿದರು. ದೇಶದ ಕುರಿತ ಮೆಚ್ಚನ್ನು ಕಾವ್ಯ ಮುಖೇನ ಪ್ರಕಟಿಸಿದರು. ಆದರೆ ಕವಿಯ ದೇಶಭಕ್ತಿ, ಸಾಮಾಜಿಕ ಹೊಣೆ, ವೈಯಕ್ತಿಕ ಬದುಕಿನಲ್ಲಿ ಕೋಲಾಹಲವನ್ನುಂಟು ಮಾಡಿತು. "ನರಬಲ ಕವನವು ಬಲಿ ಮಾಡಿತೆನ್ನನು"ಎಂದು ಸ್ವತಃ ಕವಿಯೇ ವಿಷಾಧಿಸುತ್ತಾರೆ. ಆಳುವವರ ವಿರುದ್ಧ ಬರೆದ ದೇಶದ್ರೋಹದ ಕವನ ಎಂದು ಕವಿಯನ್ನು 'ಹಿಂಡಲಗಿ' ಜೈಲಿಗೆ ತಳ್ಳಲಾಯಿತು. ಮುಗದದ ಸೆರೆಮನೆಯಲ್ಲಿ ನಜರ್‌ಬಂಧಿ ಶಿಕ್ಷೆಯನ್ನು ವಿಧಿಸಿದರು. ಸೆರೆಮನೆ ವಾಸ ಮುಗಿದ ನಂತರ ಜೈಲು ಶಿಕ್ಷೆಗೆ ಒಳಗಾದವನು ಎಂದು ಸರಕಾರಿ ನೌಕರಿಗೆ ಅವಕಾಶ ಇಲ್ಲವಾಯಿತು.

'ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಗಿ
ಮುಗದದ ಮಲೆಗಾಳಿ ಮುಂದೆಳೆದಿತು
ಆಳುವರ ಮೇಲೊಬ್ಬ ಆಳುವನಿರದಿರೆ
ಹಾಳಾಗಿ ಹೋಗಿತ್ತು ಈ ಜಗವು '೧೭'

ಎಂದು ದುಃಖಿಸುತ್ತಾರೆ ಕೌಟುಂಬಿಕ ಸಮಸ್ಯೆ, ಮೇಲಿಂದ ಮೇಲೆ ಒತ್ತರಿಸಿ ಬುರತ್ತಿದ್ದ ಸಾವು, ಬಡತನ ಇತ್ಯಾದಿಗಳಿಂದಾಗಿ ಕಂಗೆಟ್ಟ ಕವಿಗೆ ಪತ್ನಿಯ ವಿಮುಖತೆ ನುಂಗಲಾರದ ತುತ್ತಾಗುತ್ತದೆ.

ಜೋಡಿ ಇಲ್ಲದ ಎತ್ತು ಎಳೆದಾಡುವ ಗಾಡಿ
ನಡೆದಂತೆ ತತ್ತರಿಸಿ ಬಗೆತನವು
ಹಗೆಯಾಗದಿರಲೆಂದೆ ಇಬ್ಬರೂ ಹವಣಿಸಿ
ಒಬ್ಬರನ್ನೊಬ್ಬರ ತೂಗಿದವು '೧೮'

ಎಂಬ ನೋವಿನಲ್ಲಿ ಕವಿ ಉಮ್ಮಳಿಸುತ್ತಾರೆ. ತಾಯ್ತನದ ಎಳೆತ, ಬಡತನದ ಹೊಡೆತಗಳಿಂದ ತತ್ತರಿಸಿದ ಸಖಿಯ ದುಃಖಕ್ಕೆ ಸಮಭಾಗಿಯಾಗಿಯಾದ ಕವಿ

'ತ್ರಾಸು-ತಕ್ಕಡಿ-ಮುಳ್ಳು-ಏಕಾಗ್ರವಿರುವಂತೆ
ಧಾರಣೆಯಲ್ಲಿ ಕೆಲದಿನ ಕಳೆದಿವೆ ! ಗೆಳತಿ '೧೯'

ಎಂದು ಆಕೆಯನ್ನು ಸಂತೈಸುತ್ತಾರೆ. ನೆಚ್ಚಿಗೆ ಇಲ್ಲದ ಬದುಕಿನಲ್ಲಿ ಬೆಳಕಿಂಡಿಯಂತೆ ಬಂದವು ಕೂಸುಗಳು. ಜೀವನ ಕರುಣೆಯ ಕೃಪೆಯಿಂದ ಬದುಕಿನ ಹೊಯ್ದಾಟಕ್ಕೂ ನೆಲೆ ಸಿಕ್ಕೀತು ಎಂಬ ಆಶಾಭರವಸೆ ಅವನದು.

ಕೂಸುಗಳು ಸೂಸುವ ಮೀಸಲು ನಗೆಯಲ್ಲಿ
ಮಿಂದರೂ ಮಾಸಲು ಮನವುಳಿದಿರೆ" ಮನಕ್ಕೆಲ್ಲಿ ಶಾಂತಿ ! ೨೦

ಕವಿಗೆ ಬದುಕಿನುದ್ದಕ್ಕೂ ಜಂಜಾಟವೇ ಜಂಜಾಟ. 'ಬೆಂದರೆ ಬೇಂದ್ರೆ ಆದಾನು' ಎಂಬ ಒಡನಾಡಿಗಳ ಮಾತಿನಂತೆ ಕವಿಯ ಬಾಲ್ಯ ಕಾಲದಿಂದಲೂ ಬಡತನ ಹಾಗೂ ಅಪ್ಪರ ಸಾವು ಬೆನ್ನಿಗಂಟಿಕೊಂಡೇ ಸಾಗಿತ್ತು. ಈ ನೋವಿನ ಕ್ಷಣಗಳು ಸಂತಸದ ಸಮಯದಲ್ಲೂ ಕಹಿನೆನಪಾಗಿ ಕಾಡುತ್ತಲೇ ಹೋಗುವುದನ್ನು ಕವಿ ನೆನಪಿಸಿಕೊಳ್ಳುತ್ತಾರೆ.

ಉರಿಗಾಳಿ ಬಿರುಮಳೆಗೆಲ್ಲಾ ಎದೆಗೊಟ್ಟು
ಜೀವನವೆ ಹೊಗೆಯಾಗಿ ಉಗಿಯಾಗಿಬ್ಬನಿಯಾಗಿ
ಮಂಜಾಗಿ ಮಸುಗಾಗಿ ಹೋಗುತ್ತಿದೆ '೨೧'

ಎಂದು ಕಸಿವಿಸಿಗೊಳ್ಳುತ್ತಾರೆ. ಬೇಂದ್ರೆ ತಮ್ಮ ವೈಯಕ್ತಿಕ ಬದುಕಿನಲ್ಲಿ ಏನೇ ಕಷ್ಟ ಬಂದರೂ ಸ್ನೇಹಿತರ ಸಖ್ಯದಲ್ಲಿ ಸುಖ ಕಂಡವರು ಅವರ ಬದುಕಿನಲ್ಲಿ ಗೆಳೆಯರು ಬಹಳ ಮುಖ್ಯಪಾತ್ರ ವಹಿಸಿದವರು. ಅವರ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಸ್ನೇಹಿತರ ಪಾತ್ರ ದೊಡ್ಡದು. ಪುಣೆಯ 'ಶಾರದಾ ಮಂಡಳಿ' ಅಮೇರಿಕಾದ ಬ್ರುಕ್ ಫಾರ್ಮಾಗಳ ಪ್ರೇರಣೆಯಿಂದ 'ಗೆಳೆಯರ ಗುಂಪು' ಸಂಘಟಿತವಾಯಿತು ಒಂದು ಸಂಘಟನೆಯ ಮೂಲಕ ಸಾಹಿತ್ಯ, ಸಂಸ್ಕೃತಿಯ ಸಾಮೂಹಿಕ ಚರ್ಚೆ ನಡೆಸುವ ಉದ್ದೇಶ ಬೇಂದ್ರೆ ಅವರಲ್ಲಿತ್ತು. ಸಾಹಿತ್ಯದ ವೇದಿಕೆಗೆ ಒಂದು ಗಂಭೀರ ಸ್ವರೂಪವನ್ನು ಕಟ್ಟಿಕೊಡುವ ಉದ್ದೇಶದಿಂದ ಸಮಾನಾಸಕ್ತರು, ಸಹೃದಯರ ಹಾಗೂ ಸ್ನೇಹಿತರ ಗುಂಪೊಂದು ಪ್ರಾರಂಭವಾಯಿತು. ಈ ಗುಂಪಿನ ಮೂಲಕ ಸಾಹಿತ್ಯಿಕ ಪತ್ರಿಕೆಗಳು, ಕನ್ನಡ ಹಬ್ಬಗಳು, ಪ್ರಂಬಧ ಪ್ರಕಟಣೆ ಕಾವ್ಯವಾಚನ ಇತ್ಯಾದಿಯಾಗಿ ಕನ್ನಡ ಸೇವೆಯನ್ನು ನಡೆಸಿತು ೧೯೨೦ರಲ್ಲಿ 'ಗೆಳೆಯರ ಗುಂಪು' ಅಸ್ಥಿತ್ವಕ್ಕೆ ಬಂತು. ಮಧುರಚನ್ನ, ಶಂಕರಗೌಡರು, ಸಿಂಪಿಲಿಂಗಣ್ಣ, ಪ್ರಹ್ಲಾದ, ಸಿದ್ಧವನಹಳ್ಳಿ ಕೃಷ್ಣಶರ್ಮ, ರಂ ಶ್ರೀ ಮುಗಳಿ, ಗೋಕಾಕ್‌ರಂತಹ ಸಾಹಿತಿಗಳು ಗೆಳೆಯರ ಗುಂಪಿನಲ್ಲಿದ್ದರು. ಜೊತೆ ಜೊತೆಯಾಗಿ ಸಾಧಿಸಿದ ಗೆಳೆತನ, ಒಡಲ ನೂಲಿನಿಂದ ನೇಯುವಂತೆ ಜೀವಾಜಾಲ' ಬೆಳೆಯುತ್ತಾ ಬಂದಿತ್ತು. ಆದರೆ ಗೆಳೆಯರ ಬಳಗದಲ್ಲಿ ಉಂಟಾದ ಭಿನ್ನಾಭಿಪ್ರಾಯಗಳು ಗೆಳೆಯರ ಬಳಗವನ್ನು ಒಡೆಯುವಂತೆ ಮಾಡಿತು. "೧೯೩೩ರ ಶ್ರಾವಣದಲ್ಲಿ ಗೆಳೆಯರ ಗುಂಪಿನ ಶ್ರಾದ್ಧ ಮುಗಿಸಿಕೊಂಡೆ" ೨೨ ಎಂದು ಬೇಂದ್ರೆ ವಿಷಾಧಿಸುತ್ತಾರೆ.

ಹನ್ನೆರಡು ವರುಷದ ತಪ ವಿಫಲವಾಯಿತೋ !
ಮಾಯೆಯ ಮಯಸಭೆ ಕಟ್ಟಿದ್ದೆವೋ !
ದೈವದ ನಿಕಷಕ್ಕೆ ಪೌರುಷವಿಳಿಯದೆ
ನಿಂತಂಥ ನೆಲವೆಲ್ಲಾ ನೀರಾಯಿತೋ ! '೨೩'

ಎಂದು ಗೆಳೆಯರ ಬಳಗದ ವಿಘಟನೆಯ ಬಗ್ಗೆ ನೋಯುತ್ತಾರೆ. ಮಗು, ಲಲಿತ ಹುಟ್ಟಿ ಅಪ್ಪ-ಅಮ್ಮನಿಗೆ ಖುಷಿಕೊಟ್ಟಷ್ಟೇ ವೇಗವಾಗಿ ನೋವಿನ ಅಗ್ನಿಕುಂಡಕ್ಕೆ ತಳ್ಳಿದಳು. "ಆ ಕೂಸ ಕಳಕೊಂಡು ನೀನೆಂತೋ ಉಳಕೊಂಡು"

ಲಾಲಿತ್ಯವಿಲ್ಲದ ಶೈಲಿಯೊಲು" ಸಖಿಯ ನೋವಿಗೆ ಮರುಕ ಸೂಚಿಸುತ್ತಾರೆ. ಪತಿಯ ಮರುಕಕ್ಕೆ ಸಖೀಗೀತದ ಸಖಿ ನೀಡುವ ಉತ್ತರ ಬಹು ಮಾರ್ಮಿಕವಾಗಿ ಮೂಡಿಬಂದಿದೆ.

ನಿಮ್ಮ ಮಾತಿನ ರೀತಿ ಗಹನ ರೀತಿಯ ಹಾಗೆ
ಅದರಿಂದಿರು ಈ ಪ್ರೀತಿ ಹುಸಿಗಾಳಿಯು

ನಿಮ್ಮ ಜೀವನ ರೀತಿ ಬೇಸುಗೆಯ ಬಿರುಗಾಳಿ

ಅದರ ಸೆರಗಿಗೆ ನಾನು ಬರಿಗಾಳಿಯು" '೩೪'

ಎಂಬ ಸಖಿಯ ಮಾತಿಗೆ ಕವಿ ಹುಸಿನಗೆಯ ಉತ್ತರ ನೀಡುತ್ತಾನೆ. ಬದುಕಿನ ನಾನಾ ರೀತಿಯ ಹೊಡೆತಗಳಿಗೆ ತತ್ತರಿಸಿದ ಕವಿಗೆ ಪತ್ನಿಯ ನಗೆ ಚಾಟಿಯ ಉತ್ತರವೇ ಅತ್ಯಂತ ಖುಷಿ ಎನಿಸಿದೆ.

ಅಹಹಾ ! ಜೀವದ ಗೆಳತಿ ಜೀವನದ ಜೊತೆಗಾರ್ತಿ

ನೀನಿಲ್ಲದಾನಿಲಲು ನೆಲವಿದೆಯೇ '೨೫'

ಸುಖದುಃಖಗಳಲ್ಲಿ ಜೊತೆಗಾತಿಯ ನೋವಿಗೆ ಸ್ಪಂದಿಸಿದ ಕವಿ ಈ ಬದುಕಿನಲ್ಲಿ ನನಗೆ ನೀನೇ ಆಧಾರ ಎಂದು ಘೋಷಿಸುತ್ತಾನೆ. ಪ್ರೀತಿಯ ಬಲೆಯೊಳಗೆ ಸಿಲುಕಿದ ಜೀವಕ್ಕೆ ಅಂಟಿನ ನಂಟು ಬಲವಾಗುತ್ತಿದೆ. ಸಖಿಯ ಪ್ರೀತಿ ಪತಿಗೆ ಜೀವನಾಮೃತ ಧಾರೆ

ಜೀವಗಾಧಾರ ಜೀವನಾಮೃತಧಾರೆ

ಪ್ರೀತಿ ಜೀವದೊಳಾರೆ ಜೀವನವೆ ? '೨೬'

ಎನಿಸುತ್ತಾಇದೆ ಬಡತನದ ಕಷ್ಟಕ್ಕೆ ತಲೆಯೊಡ್ಡಲು ಸಿದ್ಧವಾದ ಕವಿಗೆ, ಜೀವನಕ್ಕಾಧಾರವಾದ ಪ್ರೀತಿಯ ಕುರಿತು ಅದನ್ನು ವಿಶ್ವಾಸ. ಪತಿಯ ಓದು, ವಿದ್ಯೆ, ತಿಳುವಳಿಕೆಗಳು ಸತಿಯ ಪಾಲಿಗೆ ಅಚ್ಚರಿ, ಅವಳ ಗ್ರಹಿಕೆಗೆ ಮೀರಿದ ಅವನ ಸಾಮಾಜಿಕ ಬದುಕು ಅವಳಿಗೆ ಗೌರಿಶಂಕರದಂತೆ ಮುಗಿಲಿನೆತ್ತರಕ್ಕೆ ಏರಿ ನಿಂತ ಶಿಖರ'.

'ಯಾವುದೋ ಜನುಮದ ಕಥೆ ನೀನು ಹೇಳುವಿರಿ ಸತ್ಯ ಯುಗವು ಹೋಗಿ ಕಲಿ' ಬಂದಿದೆ ಎಂದೆಲ್ಲಾ ಹೊಸ ವಿವರಗಳನ್ನು ನೀಡಿ ನನಗೆ ಗೊಂದಲ ಮಾಡುತ್ತಿರುವಿರಿ.

ನಿಮ್ಮದೆ ಎತ್ತರಕ್ಕೆ ನಾವೇನು ಬಂದೇವು ?

ಕಲಿತವರ ಬೆಡಗಿಲ್ಲ ನಮ್ಮ ಕಡೆ '೨೭'

ನಾವು ಮುಗ್ಧರು ಎಂದು ಸಖಿ, ಸಖನ ಧ್ಯೇಯಕ್ಕೆ ಕುತೂಹಲದ ಕಣ್ಣಾಗಿದ್ದಾಳೆ. ಸಖಿ, ಪತಿಯ ಸಾಮಾಜಿಕ ಬದುಕಿನ ಬಗ್ಗೆ ಹೀಗೆ ಹೇಳುತ್ತಾಳೆ.

ನಿಮ್ಮ ಮಾತೇ ಬೇರೆ, ಮನ ಬೇರೆ, ಜನ ಬೇರೆ

ರಸರುಚಿ ಬೇರೆ, ಜೀವನ ಬೇರೆಯೆ '೨೮'

ಆದರೆ ಸಖಿಗೂ-ಸಖನಿಗೂ ಇರುವ ಅಂಟಿನ ನಂಟಿನ ಏಕರೂಪತೆ ಸಂಸಾರದಲ್ಲಿದೆ. ಸಾಮಾಜಿಕ ಏರುಪೇರುಗಳಲ್ಲಿ ಬಳಲಿ ಬೆಂಡಾಗಿ ಬಂದ ಪತಿಗೆ ಸಖಿ ಸಂತೈಸುವಿಕೆಯ ನೆರವು ನೀಡುತ್ತಾಳೆ.

ನಿಮ್ಮ ಜೀವನದಲ್ಲಿ ಮಂಗಲವಾಗಲಿ

ಎಂದೆದು ! '೨೯'

ಎಂದೇ ಕವಿ ಪತ್ನಿ ಕವಿಗೆ ಹಾರೈಸುತ್ತಾಳೆ

ಚಿಕ್ಕಪ್ಪ-ಅಪ್ಪನ ಸ್ಥಾನದಲ್ಲಿ ನಿಂತು ಇವರ ಸಂಸಾರಕ್ಕೆ ನೆರವು ನೀಡಿ ವಿದ್ಯೆಗಾಗಿ ಮತ್ತೆ ಅವಕಾಶ ನೀಡಿದಾಗ ಸಂಸಾರದ ಸಂಕಟಗಳಿಂದ ಹೊರಬಂದು ಕನ್ನಡ ಕುಲದ ಕನಸನ್ನು ಕಾಣುತ್ತಾರೆ. ಕವಿಬಾಳಿನಲ್ಲಿ ತಾಯಿ, ಪ್ರಕೃತಿ, ಸಖಿಯ ಪಾತ್ರ ದೊಡ್ಡದು. ನೋವಿನ ಪ್ರತಿಕ್ಷಣಕ್ಕೆ ಜೊತೆ ನಿಂತು ಬೆನ್ನಟ್ಟಿ ಹುರಿದುಂಬಿಸಿದ ತಾಯಿ, ಅವಳ ಪ್ರೀತಿ, ಮರಮರಳಿ ಬರುತ್ತಿದ್ದ ಶ್ರಾವಣ, ಪ್ರಕೃತಿಯ ಚೆಲುವು, ಬದುಕಿನ ಬಂಡಿಗೆ ಜೊತೆಗೂಡಿದ

ಪತ್ನಿ ಲಕ್ಷ್ಮೀಬಾಯಿ, ಇವರೆಲ್ಲರ ಪ್ರೀತಿಗಳೇ ಅವರಿಗೆ ಆತ್ಮಸ್ಥೈರ್ಯವನ್ನು ಹೆಚ್ಚಿಸುತ್ತಿತ್ತು.

ಪಾಕ ಹೊಂದಿದ ಪ್ರಕೃತಿ ಪ್ರೇಮದಿ ಪರಿಣಮಿಸಿ
ಜೀವನ ದೇವನ ಮಾಡುವದು
ಕಲಿಕೆಯ ಮಾತಲ್ಲ. ವಾದದ ಫಲವಲ್ಲ
ಅದೃಷ್ಟವಶವಲ್ಲ, ಎದೆಯೊಲವು '೩೦'

ಕವಿಗೆ ಲಭಿಸಿದ ಸಮೃದ್ಧ ಪ್ರೀತಿ ಜೀವನದಲ್ಲಿ ದೈವತ್ವವನ್ನು ಸಾಕಾರಗೊಳಿಸಿತು. ಎದೆಯಾಲವ ಧಾರೆ ಮನೆಯ-ಮನದ ಕಹಿಯನ್ನು ತೊಳೆದು ಹಾಕಿತು. ಕವಿಯು ತನ್ನ ವೈಯಕ್ತಿಕ ಬಾಳಿಗೆ ಜೊತೆಗೂಡಿ ನಲಿವಿತ್ತ ಪತ್ನಿಯನ್ನು ಸಾಮಾಜಿಕ ಬದುಕಿಗೆ ಎಳೆದೊಯ್ಯುವ ಆಸೆ. 'ನೆಡೆಗೆಳತಿ ಥೀಂಕಿಟ್ಟು ಕನ್ನಡಕ್ಕೆ' ಎಂದು ಅವಳ್ನು ಆಹ್ವಾನಿಸುತ್ತಿದ್ದಾರೆ. ತಾವು ಬದುಕಿರುವ ಸಾಂಸ್ಕೃತಿಕ ಸಂದರ್ಭದ ಅರಿವು-ಹೊಣೆಗಾರಿಕೆಯಲ್ಲಿ ಕವಿಯ ಈ ಕರೆ ಸೂಕ್ತವಾಗಿದೆ.

ಒಳಗೊಂದು ಸಖ ಜೀವ
ಸಖಿ! ಬ್ಯಾರೆ ಬಾ! ಎಂದು ಕೂಗುತಿದೆ.
ಮುಂದಿನ ಪಥದಲಿ ಸಖಿಯಾಗು ಬಾ !
ನಾನು ನೀನೂ ಸಖ-ಸಖಿ ಸಮ-ಸುಖಿ '೩೧'

ಎನ್ನುತ್ತಾ ತನ್ನ ಬಾಳ ಬೆಳಕಾದವಳನ್ನು ಸಮಸಖ್ಯಕ್ಕೆ ಆಹ್ವಾನಿಸುತ್ತಿದ್ದಾರೆ. ಸಖಿಯೊಂದಿಗಿನ ಜೀವನ ಹೇಗಿರುತ್ತದೆ? ಕೇವಲ ಅನ್ನಕ್ಕೆ, ಕಾಮಕ್ಕಾಗಿ ಅಲ್ಲ ಪರಸ್ಪರ ಸಹಕಾರ-ಸಮಪಾಲು ಇದ್ದಾಗ ನಿಜ ಬದುಕಿರುತ್ತದೆ.

ಅನ್ನಕ್ಕೆ ಬಾಳಾಗಿ ಕಾಮಕ್ಕೆ ಹೋಳಾಗಿ
ಮಾನಕ್ಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ. ಜೀವ ಜೀವಕ್ಕೆ ಉ
ದ್ದೀಪನವಾದುದೆ ಜೀವನವು '೩೨'

ಪತಿ ಪತ್ನಿಯರು ಜೀವನ ಸಂಕಟದ ಬೆಂಕಿಯಲ್ಲಿ ಬೆಂದು ಸಖ-ಸಖಿಯರಾಗುವ ಪ್ರೀತಿ ಅತ್ಯಂತ ಹೃದಯಂಗಮವಾಗಿ ಮೂಡಿ ಬಂದಿದೆ. ವೈಯಕ್ತಿಕ ಬದುಕು ಮಾನವತಾವಾದದೊಂದಿಗೆ ವಿಶ್ಲೇಷಿಸಲ್ಪಟ್ಟಿದೆ. ಪತಿ-ಪತ್ನಿಯರ ಕಾಮ-ಪ್ರಣಯ-ಪ್ರೀತಿಯಗಳು ಸ್ನೇಹವಾಗಿ ಮಾರ್ಪಾಟಾದ ಹಂತವಿದು. ಪತ್ನಿ-ಸಖಿಯಾದ ರೀತಿ ಈ ಮಾತಿನಲ್ಲಿ ಸ್ಪಷ್ಟಗೊಂಡಿದೆ.

ಅದು ಇದೆ ಎದೆಯಲ್ಲಿ, ಬೆಳಕಿನ ಬದಿಯಲ್ಲಿ ಕಿವಿ ಸ್ನೇಹದ ಉದಯದ ವಿವರ ನೀಡುತ್ತಿದ್ದಾರೆ.
ರಸಗಂಗಾನದಿಯಲ್ಲಿ ಅದರುಗಮ
ಹೆಸರದಕೆ ಪ್ರೀತಿಯು, ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧುಸಂಗಮ '೩೩'

ಸಖ-ಸಖಿಯ ಮಿಲನ ಮಧು ಸಂಗಮವಾದ ಬಗೆಯನ್ನು ಕವಿ ಹೆಮ್ಮೆಯಿಂದ ಹಿಗ್ಗಿನಿಂದ ಹೇಳಿಕೊಳ್ಳುತ್ತಾರೆ. ಪ್ರೀತಿಯ ಬೆಳಕು ಸೃಷ್ಟಿಯಾಗಿ ತನ್ನ ಬದುಕಿನಲ್ಲಿ ಪಸರಿಸಿಕೊಂಡ ಸಂತಸವನ್ನು ಮಧುರವಾಗಿ ನೆನಪಿಸಿಕೊಳ್ಳುತ್ತಾರೆ.

ಪತಿಯ ಸುಖ-ದುಃಖಗಳಲ್ಲಿ ಸದಾ ಪಾಲು ಕೇಳುವ ಪತ್ನಿಗೆ ಪತಿಯ ಪತಿಯ ಸಂತಸವೇ ತನ್ನ ಸಂತಸವಾಗುತ್ತದೆ ಆದರೆ

ನಿಮ್ಮದೆ ಕರಗಿದರೆ ನನಗೆ ನೀರೆರೆವುದು
ಚಳಿಗಾಳಿ ಬಂದಂತೆ ಕಲ್ಲಾಗಲು
ನಾ ತಣ್ಣಗಾಗುತ ನಡುಗುತ ಅಡಗಲು
ಓಡುವೆ ದಿಗ್ದೇಶಕೆಲ್ಲಾದರೂ 'ಞಳ'

ಎಂದು ತನ್ನ ಮನದಳಲನ್ನು ತೋಡಿಕೊಳ್ಳುತ್ತಾಳೆ. ತನ್ನ ಪತಿಗಿಂತ ಭಿನ್ನವಾಗಿರುವ ಆದರೆ ಅವನ ಅವಲಂಭಿಸಿರುವ ಹೆಣ್ಣಿನ ಮನಸ್ಸನ್ನು ಇದು ವ್ಯಕ್ತಪಡಿಸುತ್ತದೆ.

ಗೆಳೆಯರ ಕೂಡಾಡಿ ಬಂದಾಗ ನಾ ನಿಮ್ಮ
ಮುಖದಲ್ಲುಕ್ಕುವ ಗೆಲುವು ಕಂಡಿಲ್ಲವೆ !
ಮನೆ ಬೆಳಕು ಮುಂದಿರ ಆ ಕುಣ್ಣು ಕುಂದಿರೆ
ನಾನೊಳಗೆ ನೊಂದಿರೆ ನೀವರಿಯಿರೆ 'ಞೞ'

ಗೆಳೆಯರ ಸಖ್ಯದಿಂದ ದೊರೆತ ಸಂತಸವನ್ನು ತುಂಬು ಸಂತಸದಿಂದ ಸಖಿ ಸ್ವಾಗತಿಸುತ್ತಾಳೆ. ಪತಿಯ ಗೆಳೆತನದ ಮೌಲ್ಯವನ್ನು ಅರಿತವಳು ಈ ಸತಿಪತಿಗಾದ ನೋವಲ್ಲಿ ನಾನೂ ಪಾಲುದಾರಳೇ ಹೌದು ಎಂದು ಶ್ರುತಪಡಿಸುತ್ತಿದ್ದಾಳೆ. ಅದೇ ಸಂದರ್ಭದಲ್ಲಿ ತನ್ನ ಗೋವಿಗೆ ಸ್ಪಂದಿಸದ ಪತಿಯ ಕುರಿತು ಆರೋಪವನ್ನು ಹೊರಿಸುತ್ತಾಲೆ.

ಏಕೆಂದು-ಸಾಕೆಂದು... ಬೇಕೆಂದು... ನೂಕೆಂದು
ರಮಿಸಲಾಡಿದಿರಲ್ಲ ನಿಮ್ಮಿಷ್ಟಕ್ಕೇ
ಗಂಗೆಯ ಕಷ್ಟವು ಗೌರಿಗೆ ತಿಳಿಯದು
ಹೆಂಗಸಿನ ಕಷ್ಟವು ಗಂಡಸಿಗೆ
ಎಂದಿಗು ತಿಳಿಯದು ! ಏತಕ್ಕೆ ತಿಳಿಯೋದು
ದುಃಖವು ನಮ್ಮದು ನಮಗೆ ಇದೆ ! 'ಞ೬'

ಎಂದು ಸಖಿ ದುಃಖಿಸುತ್ತಾಳೆ. ಆದರೆ ತನಗೆ ಏನಾದರೂ ಆಗಲಿ, ನಿಮ್ಮ ಜೀವನದಲ್ಲಿ ಮಂಗಳವಾಗಲಿ' ಎಂದು ಆಕೆ ಹಾರೈಸುತ್ತಾಳೆ. ಸಖಿಯ ಹಾರೈಕೆ ಪತಿಗೆ ತನ್ನ ಅಳಿದ ತಾಯಿಯ ವಾತ್ಸಲ್ಯವನ್ನು ನೆನಪಿಸುತ್ತದೆ.

'ನನ್ನ ತಾಯಿಯ ನೆನೆದು ನಾ ಸುಮ್ಮನಾದೆನು" ಎಂಬ ಕವಿವಾಣಿಯಲ್ಲಿ ಪತ್ನಿ, ಸಖಿಯಾಗಿ ತಾಯಾಗಿ ವಿಕಾಸಗೊಳ್ಳುವ ಪರಿಯನ್ನು ಕಾಣಬಹುದು.

ಏಕಾಂತದ ಪ್ರೇಮ ನಿವೇದನೆಯನ್ನು ಕವಿ ಲೋಕಾರಿಸುತ್ತಾ ತನ್ನ ಸಖಿಯ ಚಿತ್ರಣವನ್ನು ನೀಡುತ್ತಾರೆ.

ಕುಣಿಯೋಣು ಬಾ ಎಂದು ಪ್ರಣಯದೋಲೆಯನೊಂದು
ಎದೆವಾತಿನಿಂದೆದೆಗೆ ನಾನಟ್ಟಿದ್ದೆ.
ವಾಗಿಂದ್ರ-ಜಾಲದ ಮಾಲೆ ಮಾಲೆಯ ಬೀಸಿ
ಸಪ್ತ ಸ್ವರ್ಗದ ಮಾಲೆ ಮಾಲೆಯ ಬೀಸಿ
ಸಪ್ತ ಸ್ವರ್ಗದ ಶಿಖರವನ್ನು ಮುಟ್ಟಿದ್ದೆ
ನನ್ನ ಪಾಲಿಗೆ ಮಾತ್ರ ಹೇ ಪ್ರೇಮ ದೇವತೆ ! ಞ೬

ಮೌನ ಮುದ್ರೆಯನಲ್ಲು ನೀ ತೊಟ್ಟಿದ್ದೆ. ಬೇಂದ್ರೆಯವರು ದಾಂಪತ್ಯದ ವೈಯಕ್ತಿಕತೆಯನ್ನು ಸಖೀಗೀತದಲ್ಲಿ ಬಹಿರಂಗವಾಗಿದಿದ್ದರ ಹಿನ್ನೆಲೆಯನ್ನು ವಾಮನ ಬೇಂದ್ರೆ ಹೀಗೆ ಅರ್ಥೈಸುತ್ತಾರೆ "ದತ್ತಾತ್ರೇಯ ಲಕ್ಷ್ಮೀಬಾಯಿ ದಾಂಪತ್ಯವೆಂದರೆ ಮಾತು-ಮೌನಗಳ ದಾಂಪತ್ಯವಾಗಿತ್ತು. ಮಾತು ಮತ್ತು ಮಾನ ವಿರುದ್ಧ ಪದಗಳಾಗಿ ಕಂಡರೂ ಅವು ಪರಸ್ಪರ ಪೋಷಕ ಶಕ್ತಿಗಳು " ಮಾತು ಮೌನದ ಪ್ರತಿಮೆ, ಮೌನ ಮಾತಿನ ದೈವ" ಎಂಬುದನ್ನು ಮರೆಯುವಂತಿಲ್ಲ "

ಪಾಕ ಹೊಂದಿದ ಪ್ರೇಮಕ್ಕೆ ಕವಿ ನಾದದ ಸೆಳೆ ಮಿಂಚಿನಂತೆ ಆಕರ್ಷಿತರಾಗಿದ್ದಾರೆ. ಸಖ-ಸಖಿಯರ ಸಮಸುಖಿ ಸಾಧನೆಯನ್ನು ಬೇಂದ್ರೆ ಅವರ ಸಖೀಗೀತ ಕಾವ್ಯದಲ್ಲಿ ನಾವು ಗಮನಿಸಬಹುದಾಗಿದೆ. ಎಲ್ಲಿಂದಲೋ ಬಂದ ಹೆಣ್ಣು, ಮೈಸಲಿಗೆ ಬೆಳಸಿ ಪತ್ನಿಯಾದಳು. ಪತಿ-ಪತ್ನಿಯರ ನಡುವಿನ ಮೈಯ ಕಾಮ ಪ್ರಣಯದಾಟ ಪಕ್ವವಾಗುತ್ತಾ ಅಲ್ಲಿ ಪ್ರೇಮ ಅರಳುತ್ತದೆ. ಸತಿ-ಪತಿಯರ ಪ್ರೇಮದ ಪಕ್ವತೆ ಪತ್ನಿಯನ್ನು ಸತಿಯನ್ನಾಗಿಸುತ್ತದೆ. ಸಖಿಯ ಸಖ್ಯತೆ ಪತಿಯ ಪಾಡನೆಲ್ಲಾ ಹಾಡಾಗಿಸುತ್ತದೆ. ಆ ಹಾಡು ಕವಿಯ ದಾಂಪತ್ಯದ ಏಕಾಂತವನ್ನು ಸಖೀಗೀತವನ್ನಾಗಿಸಿತು.

ಸತಿಯರ ಹೃದಯಸ್ಥ ಸುಪ್ತರತಿಯ ತಾನು
ತಿಳಿಸಿದ್ದನಂಗನಾಲಿಂಗಿಸಿರೆ
ರತಿ ಮಂಥನದಿಂದಾದ ಮನ್ಮಥನ ವಿರುದ್ಧ
ಉಷೆಯ ಕನಸಿನ ಕೂಡಾ ಕೂಡುತಿರೆ '೩೮'

ಎಂಬ ಕವಿಯ ನುಡಿಗಳಲ್ಲಿ ಸತಿ ಪತಿಯ ನಡುವಿನ ದೈಹಿಕದಾಟದ ವರ್ಣನೆ ಇದೆ. ಇದೇ ಪ್ರಣಯ ಒಡನಾಟದ ಸಂಸರ್ಗದ ಕಾವಿಗೆ ಎದೆಯೊಲವಾಗಿ ಪರಿವರ್ತಿತವಾಗಿ ಆತ್ಮದ ನೀತಿಯ ಮಧು ಸಂಗಮವಾಗಿ ವಿಕಾಸಗೊಳ್ಳುತ್ತದೆ.

ಈ ವಿಕಸನ ಹಂತ-ಹಂತವಾಗಿ ಅರಳಿಕೊಳ್ಳುವ ಚಿತ್ರಣ ಸಖೀಗೀತದಲ್ಲಿ ಒಡಮೂಡಿದೆ. ಮಾತು-ಮೌನಗಳನ್ನು ಮೀರಿ ಮುನ್ನಡೆವ ಸಖ್ಯದ ಆಖ್ಯಾನದ ಬಂಧನವನ್ನು ಕವಿ

ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ ! ಎಂದು ಚಪ್ಪರಿಸುತ್ತಾರೆ.
ತನ್ನೆದೆಯ ಹಾಡು ಕುಣಿಯ ಹಚ್ಚಿತು ಜನಕೆ
ಕಲ್ಲಾದ ಮನಗಳ ಕರಗಿಸಿತು.
ಅಂಬಿಕಾತನಯನ ಜಂಬದ ಪಾಡಳಿದು
ನಂಬಿಕೆಯ ಹಾಡಾಗಿ ಬಂತಿಲ್ಲಿಗೆ ಎಂದು ತನ್ನ ಪ್ರೇಮ ವ್ಯಾಖ್ಯಾನವನ್ನು ಸಾಧಿಸಿದ್ದಾರೆ.
ಪೂರ್ವಾನುರಾಗವೀ ಪರ್ವಕೆ ಸಂದಿತು ಉತ್ತರೋತ್ತರವಿರಲಿ ಉತ್ತರಕೆ !
ಕಲ್ಯಾಣ-ಶಕ್ತೆಯ ಕೈಯ ಕುಶಲತೆಯಿಂದ ತಾಕವಾಗಲಿ ಪ್ರೇಮ ! ಎನುವೆನೆ '೩೯'

ಎಂಬಲ್ಲಿ ಕವಿ ಈ ತನಕದ ಸಖಿಯ ಸಖ್ಯಕ್ಕೂ ಮಿಗಿಲಾಗಿ, ಭವಿತವ್ಯ ಸಾಧಿತವಾಗಲಿ, ಕಲ್ಯಾಣವಾಗಲಿ ಎಂದು ಹಾರೈಸುತ್ತಾರೆ. ದಾಂಪತ್ಯದ ಸಂಬಂಧ ದೈಹಿಕತೆಯನ್ನು ಮೀರಿ ದೈವಿಕತೆಯಲ್ಲಿ ಪರ್ಯಾವಸಾನವಾಗುವುದು ಸಖೀಗಿತದಲ್ಲಿನ ವೈಶಿಷ್ಟ್ಯ. ತನ್ನ ಬದುಕಿನ ಸೃಜನಶೀಲತೆಯ ನಾನಾ ನೆಲೆಗಳನ್ನು ಸಖೀಗೀತದಲ್ಲಿ ಕವಿ ಗುರುತಿಸಿಕೊಂಡಿದ್ದಾರೆ. ಕವಿಯ ವೈವಾಹಿಕ ಜೀವನದ ಮೊದಲ ೧೭ ವರ್ಷಗಳ ವೈಯಕ್ತಿಕ ನೆಲೆಯಲ್ಲಿ

ದಾಂಪತ್ಯ ಗೀತೆಯಾದರ ಕೂಡ ಸಖೀಗೀತಕ್ಕೆ ಸಾಂಸ್ಕೃತಿಕ ಮಹತ್ವವಿದೆ. ಕವಿಯ ವೈಯಕ್ತಿಕ ವಿವರ, ಸಾಮಾಜಿಕ ವಿವರ, ಸಮಕಾಲೀನವಾದ ರಾಷ್ಟ್ರೀಯ ವಿವರಗಳೊಂದಿಗೆ ಪ್ರಮುಖವಾಗಿ ಸ್ತ್ರೀಯ ವಿವಿಧ ಮುಖಗಳನ್ನು ಸಖೀಗೀತ ವಿವರಿಸುತ್ತದೆ.

ಸಖೀಗೀತ ಕಾವ್ಯ 'ಅಕ್ಕರ ಛಂದದ ಸಾಂಗತ್ಯದ ಸಂಸ್ಕಾರ' ದೊಂದಿಗೆ ಬಂದಿದೆ. ಕವಿಯ ಅಭಿಪ್ರಾಯದಂತೆ ಪಂಡಿತ-ಪಾಮರರಿಬ್ಬರ ನಾಲಿಗೆಯೊಳು ಒಡಂಬಡುವಂತೆ ರಂಜಿಸಿದೆ.

ಮಾರ್ಗ ಹಾಗೂ ದೇಶೀ ಮಾರ್ಗದ ಸಮನ್ವಯತೆ ಈ ನೀಳ್ಗಾವ್ಯದಲ್ಲಿ ಇದೆ.

ಕವಿತೆಯ ಮುಕ್ತಾಯದಲ್ಲಿ ಕವಿ ತನ್ನ ಕವಿತೆಯ ಸ್ವರೂಪವನ್ನು ತೆರೆದು ತೋರಿಸಿದ್ದಾವಲ್ಲದೆ, ದಾಂಪತ್ಯ ಸಂಬಂಧಕ್ಕೆ ಮಂಗಳವನ್ನೂ ಹಾಡಿದ್ದಾನೆ. ಲಲ್ಲೆಯ ಮಾತುಗಳ ಲಾಲಿತ್ಯ, ದೇಶೀಯ ನುಡಿಛಂದ, ಲಾವಣಿಯ ಅಲಂಕಾರ, ತಂತಡಿತ ಪಾದುರರೀರ್ವರನ್ನು ರಂಜಿಸಬಲ್ಲ ರಸವಂತಿಕೆ ಬುದ್ಧಿಯ ಹುರಿ.... ಇಂಥ ಕಾವ್ಯಗುಣವನ್ನು ವಿಮರ್ಶಕ ದೃಷ್ಟಿಯಿಂದ ಕವಿ ಇಲ್ಲಿ ಗುರುತಿಸಿದ್ದಾರೆ. ಏಕಾಂತವನನು ಲೋಕಾಂತವನ್ನಾಗಿ ಪರಿವರ್ತಿಸುವುದರ ಔಚಿತ್ಯವನ್ನು ಹೇಳಿಕೊಂಡಿದ್ದಾನೆ.

ಸಧ್ಯದ ಸಾಲು ಕುಣಿತದ ಹಾಡಿದು ಗುಣಿಯ ಹಚ್ಚಿತು ಜನತೆ
ಕಲ್ಲಾದ ಮನಗಳ ಕರಗಿಸಿತು '೪೦'

ಎಂದು ತನ್ನ ಕಾವ್ಯದ ಶಕ್ತಿಯನ್ನು ಕೊಂಡಾಡಿದ್ದಾನೆ

ತನ್ನ ಆತ್ಮ ನಿವೇದನೆಯ ಸಂದರ್ಭದಲ್ಲಿ ಕಷ್ಟಗಳ ಪುನರುಕ್ತಿಯಲ್ಲೆಲ್ಲಾ ಏಕಾತಾನತೆಯನ್ನು ತಪ್ಪಿಸಲೋ ಎಂಬಂತೆ ಪ್ರಕೃತಿ ವರ್ಣನೆಗಳು ಕಂಡುಬರುತ್ತದೆ. ಋತು ವಿನ್ಯಾಸದ ವಿವಿಧ ವಿವರಗಳನ್ನು ಪುರುಷ ಪ್ರಕೃತಿಯ ಹಿನ್ನೆಲೆಯಲ್ಲಿ ಅಭಿವ್ಯಕ್ತಿ ಸುತ್ತಾ ಸಾಗುತ್ತಾರೆ.

ವ್ಯಕ್ತಿ ಪ್ರೀತಿ, ಪ್ರಕೃತಿ ಪ್ರೀತಿ, ಸಮಷ್ಟಿಗಳ ಒಟ್ಟು ವಿವರಗಳನ್ನು ಕವಿ ಬೇಂದ್ರೆಯವರು ಸಖೀಗೀತದಲ್ಲಿ ಬಿಂಬಿಸಿದ್ದಾರೆ.

## ಅಡಿ ಟಿಪ್ಪಣಿ

### ೬ ಸಖೀಗೀತ

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧. ವಾಮನ ಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿಕಾಸ ಸಂಪುಟ-೩ | ವರಕವಿ ಡಾ|| ದ.ರಾ. ಬೇಂದ್ರೆ, ಸಂಶೋಧನಾ ಸಂಸ್ಥೆ ಹುಬ್ಬಳ್ಳಿ, ೨೦೦೩, (ಪು.೬೫) |
| ೨. ವಾಮನ ಬೇಂದ್ರೆ (ಸಂ) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ಸಿದ್ಧಾಂತ ಸಂಪುಟ-೬ | ವರಕವಿ ಡಾ|| ದ.ರಾ. ಬೇಂದ್ರೆ, ಸಂಶೋಧನಾ ಸಂಸ್ಥೆ ಹುಬ್ಬಳ್ಳಿ, ೨೦೦೩, (ಪು.೧೧, ೧೨) |
| ೩. ನಾಗರಾಜು ಡಿ.ಆರ್. | ಶಕ್ತಿ ಶಾರದೆಯ ಮೇಳ | ಅಕ್ಷರ ಪ್ರಕಾಶನ, ಸಾಗರ ಕರ್ನಾಟಕ ೧೯೮೭ (ಪು.೨೦೪) |
| ೪. ವಾಮನ ಬೇಂದ್ರೆ (ಸಂ.) | ಅಂಬಿಕಾತನಯದತ್ತ ಸಮಗ್ರ ಕಾವ್ಯ ವಿಕಾಸ ಸಂಪುಟ-೩ | ವರಕವಿಡಾ. ದ.ರಾ.ಬೇಂದ್ರೆ ಸಂಶೋಧನಾ ಕೇಂದ್ರ ಹುಬ್ಬಳ್ಳಿ ೨೦೦೩ (ಪು.೮೬) |
| ೫. ಅದೇ | | (ಪು.೮೬) |
| ೬. ಅದೇ | | (ಪು.೮೬) |
| ೭. ಅದೇ | | (ಪು.೮೬) |
| ೮. ಅದೇ | | (ಪು.೮೬) |
| ೯. ಅದೇ | | (ಪು.೮೭) |
| ೧೦. ಅದೇ | | (ಪು.೮೮) |
| ೧೧. ಅದೇ | | (ಪು.೯೦) |
| ೧೨. ಅದೇ | | (ಪು.೯೫) |
| ೧೩. ಅದೇ | | (ಪು.೯೭) |
| ೧೪. ಅದೇ | | (ಪು.೧೦೫) |
| ೧೫. ಅದೇ | | (ಪು.೧೦೨) |
| ೧೬. ಅದೇ | | (ಪು.೧೦೭) |
| ೧೭. ಅದೇ | | (ಪು.೧೦೯) |
| ೧೮. ಅದೇ | | (ಪು.೧೧೦) |
| ೧೯. ಅದೇ | | (ಪು.೧೧೦) |

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೨೦. ಅದೇ | | (ಪು.೧೧೨) |
| ೨೧. ಅದೇ | | (ಪು.೧೧೩) |
| ೨೨. ದ.ರಾ. ಬೇಂದ್ರೆ | ಸಾಹಿತ್ಯದ ವಿರಾಟ್ ಸ್ವರೂಪ | ಸಮಾಜ ಪುಸ್ತಕಾಲಯ ಧಾರವಾಡ ೧೯೯೦ (ಪು.೭೮) |
| ೨೩. ವಾಮನಬೇಂದ್ರೆ (ಸಂ) | ಅಂಬಿಕಾತನಯದತ್ತ ಸಮಗ್ರ ಕಾವ್ಯ ವಿಕಾಸ ಸಂಪುಟ-೩ | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೨೦೦೩ (ಪು.೧೧೪) |
| ೨೪. ಅದೇ | | (ಪು.೧೧೭) |
| ೨೫. ಅದೇ | | (ಪು.೧೧೭) |
| ೨೬. ಅದೇ | | (ಪು.೧೧೮) |
| ೨೭. ಅದೇ | | (ಪು.೧೧೯) |
| ೨೮. ಅದೇ | | (ಪು.೧೨೦) |
| ೨೯. ಅದೇ | | (ಪು.೧೨೦) |
| ೩೦. ಅದೇ | | (ಪು.೧೨೨) |
| ೩೧. ಅದೇ | | (ಪು.೧೨೩) |
| ೩೨. ಅದೇ | | (ಪು.೧೨೩) |
| ೩೩. ಅದೇ | | (ಪು.೧೨೩) |
| ೩೪. ಅದೇ | | (ಪು.೧೧೯) |
| ೩೫. ಅದೇ | | (ಪು.೧೨೦) |
| ೩೬. ಅದೇ | | (ಪು.೧೨೦) |
| ೩೭. ಅದೇ | | (ಪು.೧೦೬) |
| ೩೮. ಅದೇ | | (ಪು.೧೦೪) |
| ೩೯. ಅದೇ | | (ಪು.೧೨೪, ೧೨೫, ೧೨೬) |
| ೪೦. ಅಮೂರ ಜಿ.ಎಸ್ | ಭುವನದ ಭಾಗ್ಯ | ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು ೧೯೯೬ (ಪು.೧೨೫) |

ಅಧ್ಯಾಯ ೭

# ಬೇಂದ್ರೆ : ಕಾವ್ಯ ಶೈಲಿ

ಬೇಂದ್ರೆ ನವೋದಯ ಪಂಥದ ಇನ್ನಿತರ ಕವಿಗಳಂತೆ ಗ್ರಾಂಥಿಕ ಶೈಲಿಯ ಕಡೆಗೆ ಮನಸ್ಸು ಮಾಡಲಿಲ್ಲ. ಜನವಾಣಿಯ ನಾಡಿಮಿಡಿತವನ್ನು ಅರ್ಥೈಸಿಕೊಂಡು, ಕನ್ನಡ ಜನಪದದ ಸೊಗಡನ್ನು ತಮ್ಮ ಕಾವ್ಯಗಳಲ್ಲಿ ಬಿಂಬಿಸಿದ್ದಾರೆ. ಸಾಹಿತ್ಯ ಸೃಷ್ಟಿಗೆ ತೊಡಗಿದ ಪ್ರತಿಯೊಬ್ಬ ಸಾಹಿತಿಗೂ ತನ್ನದೇ ಆದ ಭಾಷಾ ಶೈಲಿಯ ಅಗತ್ಯ ಹಾಗೂ ಅನಿವಾರ್ಯತೆಗಳಿರುತ್ತದೆ. ಬೇಂದ್ರೆ ಕಾವ್ಯ ಶೈಲಿ ನವೋದಯದ ಇನ್ನಿತರ ಕವಿಗಳಿಗಿಂತ ಭಿನ್ನವಾಗಲು ಕಾರಣವಾದ ಅಂಶಗಳ ಬಗ್ಗೆ ವಿದ್ವಾಂಸರು ಬೆಳಕು ಚೆಲ್ಲಿದ್ದಾರೆ. "ಉತ್ತರ ಕರ್ನಾಟಕದ ಕವಿಗಳಿಗೆ ಯೋಗ್ಯವಾದ ಭಾಷಾ ಸಮಸ್ಯೆ ಅಧಿಕವಾಗಿ ಬಾಧಿಸುತ್ತಿತ್ತು. ಆದ್ದರಿಂದ ಅವರೆಲ್ಲರೂ ಆಡುವ ಮಾತಿಗೆ ಅಂಟಿಕೊಳ್ಳದೆ ಗತ್ಯಂತರವಿರಲಿಲ್ಲ. ಗ್ರಂಥಸ್ಥ ಭಾಷೆ ನಿರ್ಜೀವವಾಗಿತ್ತು. ಜೀವನದ ಸಂಪರ್ಕವಿಲ್ಲದೆ ಉರ್ಲು ಹಾಕಿಕೊಂಡ ಹೆಣದಂತೆ ನೇತಾಡುತ್ತಿತ್ತು. ಗ್ರಾಮ್ಯಭಾಷೆಯಲ್ಲಿ ಮಾತ್ರ ನಿಜವಾದ ಕನ್ನಡ ಕೆಚ್ಚಿನ ನಿಕ್ಷೇಪವಿತ್ತು. ಅಂತೆಯೇ ಆಗ ಜಾನಪದ ಭಾಷಾ ಮಾಧ್ಯಮವನ್ನು ಅನುಸರಿಸಿದ ಕವಿಗಳ ಕಾವ್ಯಗಳು ಕಳೆಯಿಂದ ರಸರಸಿಯಾಗಿ ಮೆರೆಯತೊಡಗಿದವು. ಈ ಗುಟ್ಟನ್ನು ಸಂಶೋಧನೆ ಮಾಡಿದ ಬೇಂದ್ರೆಯವರಿಗೆ ಅಗ್ರ ಮರ್ಯಾದೆ ಸಲ್ಲುತ್ತಿರುವುದು ಯೋಗ್ಯವೇ ಆಗಿದೆ. ಇನ್ನೂ ಒಂದು ಚಮತ್ಕಾರದ ಅಂಶವೆಂದರೆ ಬೇಂದ್ರೆಯವರು ಬಳಸುವ ಜಾನಪದ ಭಾಷೆ ಒಂದೇ ವಿಧವಾದುದಲ್ಲ. ಬ್ರಾಹ್ಮಣೀ-ಗ್ರಾಮ್ಯ ವ್ಯವಹರೀಗ್ರಾಮ್ಯ, ರೈತರ ದಲಿತರ ಗ್ರಾಮ್ಯ -ಹೀಗೆ ಹಲವುತರಹದ ಗ್ರಾಮ್ಯ ಭಾಷೆಗಳನ್ನು ಬಳಸುತ್ತಾರೆ."೧

"ಬೇಂದ್ರಯವರದು ಸ್ತ್ರೀಪೋಷಿತವಾದ ಬಾಲ್ಯ ಚಿಕ್ಕಂದಿನಲ್ಲೇ ಸಂಭವಿಸಿದ ತಂದೆಯವರ ಸಾವು. ಅವರನ್ನು ಅಜ್ಜಿ, ತಾಯಿಯರ ವಾತ್ಸಲ್ಯದ ರಕ್ಷಣೆಗೆ ಒಳಪಡಿಸಿತು. ಮೊದಲನೆಯದಾಗಿ ಬೇಂದ್ರೆಅವರ ಕಾವ್ಯದ ಮೂಲ ನೆಲೆಗಳಲ್ಲಿ ಒಂದಾದ ದೇಸಿಯ ಬಗೆಗಿನ ಒಲವನ್ನು ನಾನು ಈ ಸ್ತ್ರೀ ಪೋಷಿತಪರಿಸರದ ಫಲಿತವೆಂದು ತಿಳಿಯುತ್ತೇನೆ. ಏಕೆಂದರೆ ಬೇಂದ್ರೆಯವರು ವೇದ ಪಂಡಿತರ ಮನೆತನಕ್ಕೆ ಸೇರಿದವರಾದರೂ, ಅವರ ಕಿವಿಯ ಮೇಲೆ ಬಿದ್ದಿದ್ದು ಹಾಡುಗಳೇ ವಿನಃ ಮಂತ್ರಗಳಲ್ಲ. ಈ ಹಾಡುಗಳ ಹಿಂದೆ ಇದ್ದವರು ಹೆಣ್ಣುಗಳು, ಹರಿದಾಸರು, ಶರಣರು, ಸಂತರು ಇವರೆಲ್ಲಾ ಬೇಂದ್ರೆ ಅವರ ಅಂತರಂಗದ ಭಾಗವಾಗಿದ್ದು ಈ ವಾತಾವರಣದಿಂದಲೇ."೨

ಬೇಂದ್ರೆ ಅವರ ಪರಿಸರ ಹುಬ್ಬಳ್ಳಿ-ಧಾರವಾಡಗಳು. ಗ್ರಾಮೀಣ ಜೀವನ ಕ್ರಮವನ್ನು ಜೀವಂತವಾಗಿ ಉಳಿಸಿಕೊಂಡ ಊರಾಗಿತ್ತು. ಉತ್ತರ ಕರ್ನಾಟಕದಲ್ಲಿ ಗ್ರಾಮೀಣ ಕನ್ನಡ ಹಾಗೂ ನಾಗರೀಕ ಕನ್ನಡ, ಬ್ರಾಹ್ಮಣ ಕನ್ನಡ, ಬ್ರಾಹ್ಮಣೇತರ ಕನ್ನಡಗಳ ನಡುವಿನ ಅಂತರ ಬಹಳ ಕಡಿಮೆ ಇದ್ದುದರ ಪರಿಣಾಮ ಬೇಂದ್ರೆ ಅವರ ಭಾಷೆ ಬಗ್ಗೆ ದ್ವಂದ್ವ ಎದುರಿಸಲಿಲ್ಲ. ಕೇಳುಗರ ಮೈಮನಗಳನ್ನು ಕುಣಿಸುವ ಧಾಟಿ ಅವರ ಕಾವ್ಯದ ಶಕ್ತಿಯಾಗಿದೆ. ಆ ಕುರಿತು ಕವಿ ಬೇಂದ್ರೆ "ನನ್ನ ಜೀವನದ ಶೈಲಿಯ ಮಾತು ಅಷ್ಟೇ ನನ್ನ ಕಿವಿ ನನಗೆ ಪ್ರಮಾಣ. ಆದ್ದರಿಂದ ಗ್ರಾಂಥಿಕ ಎನಿಸುವ ಶೈಲಿಯಲ್ಲಿ ಬರೆದಾಗಲೂ, ಜನಪದದ ಹಸುರು ಮಾತುಗಳು ಅಲ್ಲಲ್ಲಿ ಮೊದಲಿನಿಂದಲೂ ತಾವಾಗಿ ಬರುತ್ತದೆ. ಅದನ್ನು ಹೊರದಬ್ಬಲು ನಾನು ಇಷ್ಟಪಡುವುದಿಲ್ಲ. ಯಾವುದಕ್ಕೆ ಯಾರ ಶೈಲಿ ಆ ಶೈಲಿಯಲ್ಲಿ ನನ್ನ ಹಾಡು ತಾನಾಗಿ ಬರುತ್ತದೆ."೩ ಎಂದಿದ್ದಾರೆ. ಪ್ರೇಮಗೀತೆಗಳ ಸಂದರ್ಭಕ್ಕೆ ಬೇಂದ್ರೆ ಬಳಸಿದ ಶೈಲಿಗಳು ಅಪ್ಪಟ ಜಾನಪದ ನಗೀನವಿಲಿನ

ನಾರೀ ನಿನ್ನ ಮಾರಿ ಮ್ಯಾಽಗ
ನಗೀ ನವಿಲ್ಽ ಆಡತಿತ್ತ
ತೋಡತಿತ್ತ ಬೇಡತ್ತಿತ್ತ
ದೂರಕದಕ್ಕ ಬಾಡತ್ತಿತ್ತ. '೪'

'ಚೆಲುವ'ದ
ಯಾರವ್ವಾ ಇವ ಚೆಲುವಾ
ತನ್ನಪ್ಪಕ್ಕಽ
ತಾನ್ಽ ನೋಡಿ ನಲಿವಾ ! '೫'

'ಪಾತರಗಿತ್ತಿ ಪಕ್ಕಾ'ದ
ಹೊನ್ನ ಚಿಕ್ಕೆ -ಚಿಕ್ಕೆ
ಇಟ್ಟು ಬೆಳ್ಳಿ ಅಕ್ಕೆ
ಸುತ್ತೂ ಕುಂಕುಮದೆಳಿ
ಎಳೆದು ಕಾಡಿಗೆ ಸುಳಿ '೬'

ತನ್ನ ಸಖಿಯನ್ನು ಮೊದಲಿಗೆ ಕಂಡಾಗ ಹುಟ್ಟಿದ ಕುಷಿ
ಹಳ್ಳಾದ ದಂಡ್ಯಾಗ ಮೊದಲಿಗೆ ಕಂಡಾಗ
ಏನೆಂದು ನಗೀ ಇತ್ತ
ಏಸೊಂದು ನಗಿ ಇತ್ತ '೭'

ಟೊಂಕದ ಮೆಲೆ ಕೈ ಇಟಕೊಂಡ ಬಿಂಕದಾಕೆ ಬೇಂದ್ರೆ ಕಾವ್ಯದ ಜಾನಪದ ಮೋಡಿಯಲ್ಲಿ 'ಬಿಸಿಲುಗುದುರಿ' ಕಾವ್ಯದಲ್ಲಿ ಕಾಣಸಿಗುತ್ತಾಳೆ.

ಟೊಂಕದ ಮೇಲೆ ಕೈ ಇಟಗೊಂಡು
ಬಿಂಕದಾಕೆ ಯಾರ ಈಕೆ
ವಂಕೀ ತೋಳ ತೋರುಸತಾಳ
ಸುಂಕದ ಕಟ್ಟ್ಯವಗ '೮'

ಹಳ್ಳಿ ಹುಡುಗಿಯ ಆಟದ ಮಾಟದ ವೈಖರಿ ಈ ಧಾಟಿಯಲ್ಲಿ ಅಲ್ಲದೆ ಬೇರೆ ದಾಟಿಯಲ್ಲಿ ಪಡಿಮೂಡಿಸಲು ಸಾಧ್ಯವೇ ? ಜೀವನದ ಮೂಲಭೂತ ಪ್ರವೃತ್ತಿಗಳನ್ನು, ಭಾವನೆಗಳನ್ನು ಪ್ರಾಚೀನ ಕಾವ್ಯದ ರೀತಿಯಲ್ಲಿ ಪ್ರಕಟಿಸುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಬೇಂದ್ರೆ ಜಾನಪದ ಕಾವ್ಯದ ಸಹಜ ಮಾರ್ಗವನ್ನು ಅವಲಂಭಿಸಿದ್ದಾರೆ.

ಇನ್ನೂ ಯಾಕ ಬರಲಿಲ್ಲವ್ವಽ ಹುಬ್ಬಳ್ಳಿಯಾಂವಾ
ವಾರದಾಗ ಮೂರು ಸರತಿ ಬಂದು ಹೋದಾಂವಾ '೯'

ಎಂಬ ಹುಬ್ಬಳ್ಳಿಯಾಂವಾ ಕವಿತೆ ಸಹೃದಯದ ಮನಸ್ಸನ್ನು ಮುದಗೊಳಿಸುತ್ತದೆ. ಹಳ್ಳಿ ಪರಿಸರದ ಚಿತ್ರಣ ನೀಡುವ 'ಗಮಗಮಾಡಸ್ತಾವ ಮಲ್ಲಿಗೆ' ಇದೇ ದಾಟಿಯ ಮತ್ತೊಂದು ಕವನ.

ಚಿಕ್ಕಿ ತೋರಸ್ತಾವ ಚಾಚಿ ಬೆರಳ

ಚಂದ್ರಾಮ ಕನ್ನಡೀ ಹರಳ '೧೦'

ಹಳ್ಳಿ ಹಾಡಿನಲ್ಲಿ ಪ್ರಾಸ ಹೆಚ್ಚು 'ಕಥೆಯಾದಳು ಹುಡುಗಿ' ಕವನದಲ್ಲಿ ಪ್ರಾಸ ಹೀಗೆ ಮೂಡಿ ಬಂದಿದೆ.

ಹಸಿಯಿದ್ದಳು ಬಿಸಿಯಿದ್ದಳು

ಸಸಿಯಿದ್ದಾ ಹುಡುಗಿ

ಹುಸಿಯರಿಯದ ಹುಡುಗಿ

ಕಣ್ಣೆದಿರಲ್ಲೇ ಬೆಳೆದಳು

ಹೊಸ ದೇಸಿಯ ಬೆಡಗಿ '೧೧'

ಕನ್ನಡ ಛಂದಸ್ಸಿನ ತಾಯಿ ಬೇರಾದ ತ್ರಿಪದಿಯಲ್ಲಿ ಬೇಂದ್ರೆ ಅನೇಕ ಗೀತೆಗಳನ್ನು ರಚಿಸಿದ್ದಾರೆ. ಬೀಸುಕಲ್ಲಿನ ಧಾಟಿಯ ಪದವೊಂದು ಹೀಗಿದೆ.

ಮಣ್ಣರಳಿ ಹೂವಾಗಿ । ನೂಲ ಬಟ್ಟೆಯಾಗಿ

ಮೈ ಮೈಗೆ ಧಾರಾಧಾರಾ, ಗುಡಿಗುಡಿಗೆ

ಹೂಬತ್ತಿ ಹೊತ್ತಿ ಮಣ್ಣರಳಿ (ಕಣ್ಣೆರಲು) '೧೨'

ಕೂಸು-ಕುಂಚೆಗೆ ತಿಂತ್ಯು ಮಾಳಿಗೆ ತಿಂತ್ಯು

ಬೆಂಚು ತಿಂದೀತು ಮೇಷ್ಟ್ರನ್ನ - ಊರಿನ

ಪಂಚರನ ತಿಂತ್ಯು ಲಂಚವು '೧೩'

ದೇಸಿ ಚಂದವನ್ನು ತಮ್ಮ ಭಾವಗೀತೆಗಳಲ್ಲಿ ಪಡಿಮೂಡಿಸಿದ ಬೇಂದ್ರೆ ಸ್ವೋಪಜ್ಞತೆಯನ್ನು ಮೆರೆದರು. ಜನಪದದ ಚೆಲುವು ಬೇಂದ್ರೆ ಗೀತೆಗಳಲ್ಲಿ ಅಚ್ಚೊತ್ತಿವೆ.

'ಜೀವನ ಒಂದು ನ್ಯಾಟಕ್ಕ

ಹೂವು ಹಣ್ಣಿನಾ ಕೂಟಕ್ಕ

ಮಲ್ಲಿಗೆ, ಮಲ್ಲಿಗಿ, ಅಲ್ಲಿಗಿ, ಇಲ್ಲಿಗಿ

ಎಲ್ಲಾನೂ ಮಲ್ಲಿಗೆ ನೋಡಣ್ಣಾ '೧೪'

ಜೀವನ ಕಲ್ಯಾಣ ಎಂಬ ಕೋಲುಹಾಡು ಮೊಳಗಿ ಬರುತ್ತದೆ.

ಬೇಂದ್ರೆ ಅವರ ಕವನಗಳ ಪ್ರಸಿದ್ಧಿಗೆ ಅವರು ಬಳಸಿದ ಜಾನಪದ ಮೋಡಿ ಕಾರಣವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

## ಅಡಿ ಟಿಪ್ಪಣಿ

### ೭ ಬೇಂದ್ರೆ : ಕಾವ್ಯಶೈಲಿ

| ಲೇಖಕರು | ಗ್ರಂಥ | ಪ್ರಕಾಶನ |
|---|---|---|
| ೧. ಬುದ್ದಣ್ಣ ಹಿಂಗಮರೆ (ಸಂ) | ಇಳಿದು ಬಾ ತಾಯಿ | ಸಾಹಿತ್ಯ ಮಂಟಪ ಹುಬ್ಬಳ್ಳಿ ೧೯೭೭ (ಪು.೧೫೫, ೧೬೦) |
| ೨. ರಾಘವೇಂದ್ರರಾವ್ ಹೆಚ್.ಎಸ್. | ಹಾಡೇ ಹಾದಿಯ ತೋರಿತು | ಕನ್ನಡ ಸಂಘ ಬೆಂಗಳೂರು ೧೯೯೫, (ಪು.೮೭, ೮೮) |
| ೩. ವಾಮನ ಬೇಂದ್ರೆ (ಸಂ.) | ಬೇಂದ್ರೆ ಜೀವನ ಪರಿಚಯ | ಶ್ರೀಮಾತಾ ಪ್ರಕಾಶನ ಧಾರವಾಡ ೧೯೯೦ (ದ.ರಾ. ಬೇಂದ್ರೆ, ನನ್ನ ನಾ ಕಂಡಂತೆ (ಪು.೧೦೬) |
| ೪. ವಾಮನ ಬೇಂದ್ರೆ (ಸಂ.) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ , ಅಂಬಿಕಾ ತನಯದತ್ತ ವೇದಿಕೆ, ಹುಬ್ಬಳ್ಳಿ ೧೯೯೮ (ಪು.೪೭, ೪೮) |
| ೫. ಅದೇ | | (ಪು.೩) |
| ೬. ವಾಮನ ಬೇಂದ್ರೆ (ಸಂ.) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿನ್ಯಾಸ ಸಂಪುಟ-೪ | ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೩೪೫) |
| ೭. ವಾಮನ ಬೇಂದ್ರೆ (ಸಂ.) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ , ಅಂಬಿಕಾ ತನಯದತ್ತ ವೇದಿಕೆ ಹುಬ್ಬಳ್ಳಿ ೧೯೯೮ (ಪು.೪೮) |
| ೮. ವಾಮನ ಬೇಂದ್ರೆ (ಸಂ.) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ವಿನ್ಯಾಸ ಸಂಪುಟ-೪ | ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೩೭೮) |
| ೯. ಅದೇ | | (ಪು.೧೭೧) |
| ೧೦. ಅದೇ | | (ಪು.೩೨೬) |
| ೧೧. ವಾಮನ ಬೇಂದ್ರೆ (ಸಂ.) | ಒಲವೇ ನಮ್ಮ ಬದುಕು | ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ ೧೮೯೮, (ಪು.೧೨೬, ೧೨೭) |
| ೧೨. ವಾಮನ ಬೇಂದ್ರೆ (ಸಂ.) | ಅಂಬಿಕಾತನಯದತ್ತರ ಸಮಗ್ರ ಕಾವ್ಯ ಸಂಪುಟ-೪ | ದ.ರಾ. ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ೨೦೦೩ (ಪು.೨೭೪) |
| ೧೩. ಅದೇ | | (ಪು.೨೭೫) |
| ೧೪. ಅದೇ | | (ಪು.೫೭೫) |

# ಉಪಸಂಹಾರ

ಪ್ರಭಾವಕ್ಕೆ ಒಳಗಾಗುವ ಕ್ರಿಯೆ ಅತ್ಯಂತ ಸಹಜವಾದದ್ದು. ನವೋದಯ ಸಾಹಿತ್ಯ ಚಿಂತನೆಯು ಪಾಶ್ಚಾತ್ಯ ಚಿಂತನೆಗೆ ಒಳಗಾಗಿತ್ತು. ಆದರೆ ಭಾರತೀಯ ಪಾರಂಪರಿಕ ಚಿಂತನೆಯಿಂದ, ದೇಶೀ ಸತ್ವಗಳಿಂದ ಪುಷ್ಟಗೊಂಡ ನವೋದಯ ಸಾಹಿತ್ಯ ಪಾಶ್ಚಾತ್ಯ ಸಂಸ್ಕೃತಿಯಿಂದ ನಿಶ್ಚಿತ ಮಾರ್ಗಗಳನ್ನು ನಿರ್ಧರಿಸಿಕೊಂಡಿತು. ಬೇಂದ್ರೆ ಈ ದೇಶಿ ಸತ್ವದ-ದೇಶಿ ಶಕ್ತಿ ಯಲ್ಲಿ ರೂಪುಗೊಂಡ ಮಹತ್ವದ ಕವಿಗಳು, ಸೃಜನ ಶೀಲತೆಯ ಹರಿವಲ್ಲಿ ತಮ್ಮ ನೆಲೆಯನ್ನು ಗುರುತಿಸಿಕೊಂಡಿದ್ದ ಬೇಂದ್ರೆ ಸಾಹಿತ್ಯದ ಇತರೆ ಪ್ರಕಾರಗಳಲ್ಲೂ ದುಡಿದಿದ್ದಾರೆ.

ರಾಷ್ಟ್ರೀಯತೆ-ಉಪರಾಷ್ಟ್ರೀಯತೆ-ದೇಶೀಯತೆ-ಗಳ ತುಯ್ತಕ್ಕೆ ಒಳಗಾಗಿ ತಮ್ಮ ಕಾವ್ಯತತ್ವಗಳನ್ನು ಬೇಂದ್ರೆ ರೂಪಿಸಿಕೊಂಡಿದ್ದಾರೆ. ಸಮಕಾಲೀನ ಸಾಹಿತ್ಯ ಸಂದರ್ಭಗಳೂ ಅವರ ಸಾಹಿತ್ಯಕ್ಕೆ ಪ್ರಭಾವಿಸಿದೆ. ಸುಮಾರು ನಲವತ್ತು ವರ್ಷಗಳ ಅವಧಿಯಲ್ಲಿ ರಚಿತಗೊಂಡಿರುವ ಬೇಂದ್ರೆ ಅವರು ಸಾಹಿತ್ಯ ಕ್ಷೇತ್ರದಲ್ಲಿ ಆಗಾಗ್ಗೆ ಉದ್ಭವಿಸಿದ ಬೇರೆ ಬೇರೆ ವಾದ -ವಿವಾದಗಳನ್ನು ಅವರ ಚಿಂತನೆಗಳಲ್ಲಿ ದಾಖಲಾಗಿಸಿದ್ದಾರೆ.

ಬೇಂದ್ರೆ ಅವರ ಕಾವ್ಯಗಳಲ್ಲಿ ಪ್ರೇಮದ ಸ್ವರೂಪಗಳ ಅವಿಷ್ಕಾರಗಳ ವಿಭಿನ್ನ ನೆಲೆಗಳನ್ನು ಈ ಪ್ರಬಂಧದಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ದೇಶೀ ಸತ್ವದ ಹಿನ್ನೆಲೆಯಲ್ಲಿ ಬೇಂದ್ರೆ ಅವರ ಪ್ರೇಮ ಕಾವ್ಯಗಳು ರಚಿತಗೊಂಡಿದೆ. 'ಒಲವು' ಬೇಂದ್ರೆ ಅವರ ತತ್ವದ ಹಿನ್ನೆಲೆಯಲ್ಲಿ ಪ್ರಣಯ ಗೀತೆಗಳು, ದಾಂಪತ್ಯಗೀತೆಗಳು, ಕಾಮ - ಪ್ರೇಮದ, ಐಂದ್ರಿಯಕ ವಿವರಗಳನ್ನು ನೀಡುವ ಕಾವ್ಯ - ವಿರಹಗೀತೆಗಳು, ಸರಸ ಗೀತೆಗಳು, ವಾತ್ಸಲ್ಯಗೀತೆಗಳು, ಸ್ನೇಹ ಗೀತೆಗಳು ಇವುಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಕವಿ ಬೇಂದ್ರೆ 'ಪ್ರೇಮ ತತ್ವ'ವನ್ನು ನಿಸರ್ಗ ಪ್ರೀತಿಯಿಂದ ಆರಂಭಿಸಿ ಅನುಭಾವಿಕ ಪ್ರೀತಿಯವರೆಗೂ ವಿಸ್ತರಿಸುತ್ತಾರೆ. ದೈಹಿಕ-ಪ್ರೀತಿ ಶುದ್ಧ ಪ್ರೀತಿಯಾಗಿ ಮಾಗುವ ಪತಿ-ಪತ್ನಿಯರು ಸಖ-ಸಖಿಯರಾಗುವ, ತಾಯಿ-ತಂದೆಯರಾಗಿ ಗುರುತರ ಕರ್ತವ್ಯಕ್ಕೆ ಶರಣಾಗುವ, ವಾತ್ಸಲ್ಯ ಗೀತೆಗಳನ್ನು ಹಾಡುವ ವ್ಯಾಪಕತೆಗೆ ಈ ಪ್ರೀತಿ ನೆಲೆಯಾಗುವುದಿಲ್ಲ. ಪ್ರೀತಿಯ ಕೊನೆಗೆ ಭಕ್ತಿಯ-ಮೋಕ್ಷವಿದೆ ಎಂದು ಸಾರುವ ಬೇಂದ್ರೆಯ ಪ್ರೇಮದ ವಿಭಿನ್ನ ಸ್ವರೂಪಗಳನ್ನು ಸೀಮಿತ ಕಾಲಾವಧಿಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಮರ-ಗಿಡ, ಬಳ್ಳಿ-ಹೂವು-ನದಿ-ಹರಿಯುವಿಕೆಗಳಲ್ಲಿ ಸೂರ್ಯ-ಚಂದ್ರರ ಮೂಡುವಿಕೆಗಳಲ್ಲಿ ಇರುವ ಅನಂತ ಪ್ರಣಯಗಳ ವಿವರಗಳನ್ನು ಪ್ರಬಂಧದ ಸೀಮಿತತೆಯ ದೃಷ್ಟಿಯಿಂದ ಕೈಬಿಡಲಾಗಿದೆ.

ಮನುಷ್ಯ ಸಂಬಂಧಗಳಲ್ಲಿನ ಪ್ರೇಮದ ವಿಭಿನ್ನ ನೆಲೆಗಳನ್ನು ಮಾತ್ರ ಚರ್ಚಿಸಲು ಪ್ರಯತ್ನಿಸಲಾಗಿದೆ. ಅತಿ ಮುಖ್ಯವಾದ ಕಾವ್ಯಗಳ ಸಂಪೂರ್ಣ ವಿವರಕ್ಕೆ ಹೆಚ್ಚು ಒತ್ತು ನೀಡಲಾಗಿದೆ. ಪ್ರೀತಿಯ ನೆಪದಲ್ಲಿ ಶೋಧನೆಗೆ ಒಳಗಾಗುವ ಪರಸ್ಪರ ವ್ಯಕ್ತಿತ್ವದ ವಿವರಗಳಿಗೆ ಆದ್ಯತೆ ನೀಡಲಾಗಿದೆ. ಬೇಂದ್ರೆ ಕಾವ್ಯಗಳು -ನವೋದಯ ಸಂದರ್ಭದ ಕೊಡುಗೆಯಾಗಿರುವುದರಿಂದ. ನವೋದಯ ಸಾಹಿತ್ಯದ ಕೆಲವಂಶಗಳನ್ನು ಪ್ರಬಂಧದ ಹಿನ್ನೆಲೆಯಲ್ಲಿ ತರಲಾಗಿದೆ.

ಬುದ್ಧಿ ಹಾಗೂ ಭಾವಗಳ ಪೂರಕ ನೆಲೆಗಳಿಂದ ಮೂಡುವ 'ಪ್ರೇಮ' ಮಾನವನನ್ನು ದೈವತ್ವದ ನೆಲೆಗೂ ಕೊಂಡೊಯ್ಯಬಹುದು ಎಂಬ ಬೇಂದ್ರೆಯ ತತ್ವಗಳನ್ನು ಈ ಪ್ರಬಂಧದ ಮಿತಿಯಲ್ಲಿ ವಿವರಿಸಲಾಗಿದೆ. ಈ ಸ್ನೇಹ - ಸಂಬಂಧಗಳಿಂದಲೇ ಬದುಕಿನಲ್ಲಿ ತೃಪ್ತಿ ಕಂಡ ಕವಿ ಸಖೀಗೀತದಲ್ಲಿ ಸಖಿಯ ಮೂಲಕ ಹೀಗೆ ನುಡಿಸಿದ್ದಾರೆ. ಗೆಳೆಯರ ಕೂಡಾಡಿ ಬಂದಾಗ ನಾ ನಿಮ್ಮ ಮುಖದಲುಕ್ಕುವ ಗೆಲವು ಕಂಡಿಲ್ಲವೆ!" ಗೆಳೆತನದ ಬದುಕು ಕವಿ ಬದುಕಿಗೆ ಕಾವ್ಯ ಸಮೃದ್ಧಿಯನ್ನು ತಂದಿತ್ತಿದೆ. ಪ್ರೇಮದ ನಾನಾ ಸ್ವರೂಪಗಳಲ್ಲಿ 'ಗೆಳೆತನ'ದ ನೆಲೆಯಲ್ಲಿ ನಿಂತ ಕವಿ, ಬದುಕು ಹಾಗೂ ಸಾಹಿತ್ಯದಲ್ಲಿ ಈ ಸ್ವರೂಪಗಳಿಗೆ ಅರ್ಥ ಕಲ್ಪಿಸಿದ್ದಾರೆ. 'ಒಲವೇ ನಮ್ಮ ಬದುಕು' ಎಂಬ ತಮ್ಮ ಮೂಲ ಮಂತ್ರವನ್ನು ಈ ಮೂಲಕ ಸಾಧಿಸಿದ್ದಾರೆ!

# ಮೂಲ ಗ್ರಂಥಗಳು


೧. ಅಂಬಿಕಾತನಯದತ್ತ : ನಾದಲೀಲೆ, ಬಾಲಚಂದ್ರ ಫಣೀಕರರು, ಪ್ರತಿಭಾ ಮುದ್ರಣ ಧಾರವಾಡ ೧೯೩೮

೨. ಅಂಬಿಕಾತನಯದತ್ತ : [illegible] ಸೂರ್ಯಪಾನ, ಸಮಾಜ ಪುಸ್ತಕಾಲಯ, ಧಾರವಾಡ - ೧೯೫೬

೩. ಅಂಬಿಕಾತನಯದತ್ತ : ಮೂರ್ತಿ ಮತ್ತು ಕಾಮ ಕಸ್ತೂರಿ, ಪ್ರತಿಭಾ ಗ್ರಂಥಮಾಲೆ, ಧಾರವಾಡ - ೧೯೪೦

೪. ಅಂಬಿಕಾತನಯದತ್ತ : ಉಯ್ಯಾಲೆ, ಪ್ರತಿಭಾ ಗ್ರಂಥ ಮಾಲೆ, ಧಾರವಾಡ - ೧೯೫೮

೫. ಅಂಬಿಕಾತನಯದತ್ತ : ಕನ್ನಡ ಮೇಘದೂತ, ಸಮಾಜ ಪುಸ್ತಕಾಲಯ, ಧಾರವಾಡ - ೧೯೭೫

೬. ಅಂಬಿಕಾತನಯದತ್ತ : ಬಾಹತರ, ಗೀತಾ ಬುಕ್ ಹೌಸ್, ಮೈಸೂರು - ೧೯೮೪

೭. ಅಂಬಿಕಾತನಯದತ್ತ : ಗರಿ, ಮನೋಹರ ಗ್ರಂಥಮಾಲೆ, ಧಾರವಾಡ

೮. ಅಂಬಿಕಾತನಯದತ್ತ : ಒಲವೇ ನಮ್ಮ ಬದುಕು, ವಿಶ್ವ ಕನ್ನಡ ಸಾಹಿತ್ಯ ಸಮ್ಮೇಳನ ಸಾಹಿತ್ಯ ಮಾಲೆ - ೧೯೮೩

೯. ದ.ರಾ. ಬೇಂದ್ರೆ : ವಿನಯ, ಗೀತಾ ಬುಕ್ ಹೌಸ್, ಮೈಸೂರು - ೧೯೭೬

೧೦. ದ.ರಾ. ಬೇಂದ್ರೆ : ಸಾಹಿತ್ಯದ ವಿರಾಟ್ ಸ್ವರೂಪ, ಸಮಾಜ ಪುಸ್ತಕಾಲಯ, ಧಾರವಾಡ - ೧೯೭೪

೧೧. ವಾಮನ ಬೇಂದ್ರೆ (ಸಂ) : ಅಂಬಿಕಾತನಯ ದತ್ತರ ಸಮಗ್ರ ಕಾವ್ಯ 'ನಮನ' ಸಂಪುಟ - ೧, ಡಾ. ಕೆ.ಎಸ್. ಶರ್ಮಾ, ನಿರ್ದೇಶಕರು, ವರಕವಿ ಡಾ॥ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩

೧೨. ವಾಮನ ಬೇಂದ್ರೆ (ಸಂ.) :ಅಂಬಿಕಾತನಯದತ್ತರ ಸಮಗ್ರ ಕಾವ್ಯ 'ದರ್ಶನ' ಸಂಪುಟ - ೨ ಡಾ॥ ಕೆ.ಎಸ್. ಶರ್ಮಾ, ನಿರ್ದೇಶಕರು, ಡಾ॥ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩

೧೩. ವಾಮನ ಬೇಂದ್ರೆ (ಸಂ.) :ಅಂಬಿಕಾತನಯದತ್ತರ ಸಮಗ್ರ ಕಾವ್ಯ 'ದರ್ಶನ' ಸಂಪುಟ - ೨ ಡಾ॥ ಕೆ.ಎಸ್. ಶರ್ಮಾ, ನಿರ್ದೇಶಕರು, ಡಾ॥ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩

೧೪. ವಾಮನ ಬೇಂದ್ರೆ (ಸಂ.) :ಅಂಬಿಕಾತನಯದತ್ತರ ಸಮಗ್ರ ಕಾವ್ಯ 'ವಿನ್ಯಾಸ' ಸಂಪುಟ - ೪ ಡಾ॥ ಕೆ.ಎಸ್. ಶರ್ಮಾ, ನಿರ್ದೇಶಕರು, ಡಾ॥ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩

೧೫. ವಾಮನ ಬೇಂದ್ರೆ (ಸಂ.) :ಅಂಬಿಕಾತನಯದತ್ತರ ಸಮಗ್ರ ಕಾವ್ಯ 'ತತ್ವ' ಸಂಪುಟ - ೨ ಡಾ॥ ಕೆ.ಎಸ್. ಶರ್ಮಾ, ನಿರ್ದೇಶಕರು, ಡಾ॥ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩ ಸಂಪುಟ - ೪

೧೬. ಅದೇ : ಅಂಬಿಕಾತನಯದತ್ತರ ಸಮಗ್ರ ಕಾವ್ಯ 'ಸಿದ್ಧಾಂತ' ಸಂಪುಟ - ೬ ಡಾ॥ ಕೆ.ಎಸ್. ಶರ್ಮಾ, ನಿರ್ದೇಶಕರು, ಡಾ॥ ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ - ೨೦೦೩ ಸಂಪುಟ - ೪

# ಪರಾಮರ್ಶನ ಗ್ರಂಥಗಳು


೧. ಅನಂತನಾರಾಯಣ ಎಸ್ : ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಾಭಾವ. ಡಿ.ವಿ.ಕೆ. ಮೂರ್ತಿ, ಮೈಸೂರು - ೨೦೦೦

೨. ಅರವಿಂದ ಮಾಲಗತ್ತಿ : ಕನ್ನಡ ವಿಮರ್ಶೆಯ ಮಾರ್ಗ ಕುವೆಂಪು. ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ಮೈಸೂರು - ೨೦೦೪

೩. ಆಮೂರ ಜಿ.ಎಸ್. : ಸೀಮೋಲ್ಲಂಘನ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು - ೨೦೦೦

೪. ಆಮೂರ ಜಿ.ಎಸ್. : ಬೇಂದ್ರೆ ಕಾವ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೨೦೦೩

೫. ಆಮೂರ ಜಿ.ಎಸ್. : ಭುವನದ ಭಾಗ್ಯ, ಪ್ರಿಯದರ್ಶಿನಿ ಪ್ರಕಾಶನ, ವಿಜಯನಗರ, ಬೆಂಗಳೂರು - ೧೯೯೬

೬. ಆಮೂರ ಜಿ.ಎಸ್. : ಕೊರಳು-ಕೊಳಲು, ಪ್ರೀಯದರ್ಶಿನಿ ಪ್ರಕಾಶನ, ಬೆಂಗಳೂರು - ೨೦೦೫

೭. ಕೀರ್ತಿನಾಥ ಕುರ್ತಕೋಟಿ : ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ, ಬೆಂಗಳೂರು - ೧೯೯೦

೮. ಕುಲಕರ್ಣಿ ಎನ್ಕೆ. : ದ.ರಾ. ಬೇಂದ್ರೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು - ೨೦೦೧

೯. ಕೆಂಪೇಗೌಡ ಕೆ. (ಸಂ.) : ಬೇಂದ್ರೆ ಸಾಹಿತ್ಯ ಸಮಾಲೋಚನೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ., ಮೈಸೂರು - ೧೯೯೬

೧೦. ಕೇಶವ ಶರ್ಮ ಕೆ. : ನವೋದಯ ವಿಮರ್ಶೆ, ಜನತಾದ್ರಿ ಪ್ರಕಾಶನ, ಗುಂಡ್ಮಿ - ೧೯೯೦

೧೧. ಗೋವಿಂದರಾಜ ಗಿ ರೆಡ್ಡಿ : ಕನ್ನಡ ನವೋದಯ ಕಾವ್ಯ ಮಂಗಳೂರು ಕೇಂದ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೨೦೦೧

೧೨. ತಿರುಮಲೇಶ್. ಕೆ.ವಿ. : ಸಮ್ಮುಖ, ಅಕ್ಷಯ ಪ್ರಕಾಶನ, ಹೆಗ್ಗೋಡು, ಸಾಗರ - ೧೯೮೯

೧೩. ನಾಗರಾಜ್ ಡಿ.ಆರ್. : ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ, ಸಾಗರ - ೧೯೯೩

೧೪. ನಾರಾಯಣಾಚಾರ್ಯ ಕೆ.ಎಸ್. : ಬೇಂದ್ರೆ ಕಾವ್ಯದಲ್ಲಿ ಆಧ್ಯಾತ್ಮರ ನೆಲೆ ಮತ್ತು ಆರ್ಷದೃಷ್ಟಿ ಪಾಂಡುರಂಗ ಬೇಂದ್ರೆ ಶ್ರೀಮಾತಾ ಪ್ರಕಾಶನ, ಸಾಧನಕೇರಿ, ಧಾರವಾಡ - ೧೯೯೬

೧೫. ನೀಸಾರ್ ಅಹ್ಮದ್ ಕೆ.ಎಸ್. (ಸಂ): ದಶವಾರ್ಷಿಕ ವಿಮರ್ಶೆಗಳು (೧೯೭೧-೮೩) ಕ.ಸಾ.ಅ. ಬೆಂಗಳೂರು - ೧೯೮೬

೧೬. ಬುದ್ದಣ್ಣ ಹಿಂಗಮಿರಿ (ಸಂ.) : ಇಳಿದು ಬಾತಾಯಿ, ಶ್ರೀ ಬೇಂದ್ರೆ ಅಭಿನಂದನ ಗ್ರಂಥ, ಸಾಹಿತ್ಯ ಮಂಟಪ, ಹುಬ್ಬಳ್ಳಿ ಮತ್ತು ಸಮಾಜ ಪುಸ್ತಕಾಲಯ, ಧಾರವಾಡ - ೧೯೭೭

೧೭. ಮಂಗಳಾ ಪ್ರಿಯದರ್ಶಿನಿ : ಬೇಂದ್ರೆ, ಕ.ಸಾ. ಅಕಾಡೆಮಿ, ಕನ್ನಡ ಭವನ, ಬೆಂಗಳೂರು - ೨೦೦೩

೧೮. ರಾಘವೇಂದ್ರ ರಾವ್ ಹೆಚ್.ಎಸ್. : ಹಾಡೆ ಹಾದಿಯ ತೋರಿತು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು - ೧೯೯೫

೧೯. ರಾಘವೇಂದ್ರ ರಾವ್ ಹೆಚ್.ಎಸ್. : ಶತಮಾನದ ಸಾಹಿತ್ಯ ವಿವರ್ಶೆ, ಕ.ಸಾ. ಅಕಾಡೆಮಿ, ಬೆಂಗಳೂರು - ೨೦೦೧

೨೦. ಲೋಕೇಶ್ ಅಗಸನ ಕಟ್ಟೆ : ಆಧುನಿಕ ಕನ್ನಡ ಕಾವ್ಯ ಸಮಾಜ - ಸಂಸ್ಕೃತಿ, ಅಲೋಕ, ತರಳಬಾಳು, ಬಡಾವಣೆ, ಚಿತ್ರದುರ್ಗ - ೨೦೦೩

೨೧. ವಾಮನ ಬೇಂದ್ರೆ (ಸಂ.) : ಬೇಂದ್ರೆ ಜೀವನ ಪರಿಚಯ, ಶ್ರೀ ಮಾತಾ ಪ್ರಕಾಶನ, ಧಾರವಾಡ - ೧೯೯೦

೨೨. ಶಂಕರ ಮೊಕಾಶಿ ಪುಣೇಕರ : ಸಾಹಿತ್ಯ ಮತ್ತು ಅಭಿರುಚಿ, ಮಿತ್ರ ಪ್ರಕಾಶನ, ಮೈಸೂರು

೨೩. ಶಿವರುದ್ರಪ್ಪ ಜಿ.ಎಸ್. : ಕನ್ನಡ ಸಾಹಿತ್ಯ ಸಮೀಕ್ಷೆ, ತಳುಕಿನ ವೆಂಕಣ್ಣಯ್ಯ ಗ್ರಂಥಮಾಲೆ, ಮೈಸೂರು - ೨೦೦೭

೨೪. ಶಿವರುದ್ರಪ್ಪ ಜಿ.ಎಸ್. : ನವೋದಯ, ನೆಲಮನೆ ಪ್ರಕಾಶನ, ಮೈಸೂರು - ೧೯೮೧

೨೫. ಶಿವಾರೆಡ್ಡಿ ಕೆ.ಸಿ. : ಕನ್ನಡದ ಹಾಡು-ಪಾಡು, ಅಧ್ಯಯನ ಮಂಡಲ, ಕೆ.ಆರ್. ನಾಗರಾಜ, ಬೆಂಗಳೂರು - ೨೦೦೩

೨೬. ಶ್ರೀಕಂಠಯ್ಯ ತೀ.ನಂ. : ಸಮಾಲೋಕನ, ಶೃಂಗಾರ ಪ್ರಕಾಶನ, ಚಿಕ್ಕನಾಯಕನಹಳ್ಳಿ- ೧೯೯೯

೨೭. ಶ್ರೀನಿವಾಸರಾಜು ಚಿ. : ಬೇಂದ್ರೆ ಸಾಹಿತ್ಯ ಒಂದು ಅಧ್ಯಯನ, ಕನ್ನಡ ಸಾ.ಪ. ಕ್ರೈಸ್ತ ಕಾಲೇಜು, ಕುವೆಂಪುನಗರ, ಬೆಂಗಳೂರು - ೨೦೦೦

೨೮. ಶೇಷಗಿರಿ ರಾವ್ : ಹೊಸಗನ್ನಡ ಸಾಹಿತ್ಯ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು - ೧೯೮೮

೨೯. ಸಿದ್ಧಲಿಂಗಯ್ಯ ಜಿ.ಎಸ್. : ಹೊಸಗನ್ನಡ ಕಾವ್ಯ ಬೆಂಗಳೂರು ವಿ.ವಿ., ಬೆಂಗಳೂರು - ೧೯೮೮

೩೦. ಹರಿ ಕೃಷ್ಣ ಭರಣ್ಯ : ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ (೧೯೮೦ - ೧೯೨೦), ಪ್ರಭಸ ಬಿಡುಗಡೆ, ಮಧುರೈ - ೧೯೯೦

೩೧. ಪ್ರಭು ಶಂಕರ : ಕನ್ನಡದಲ್ಲಿ ಭಾವಗೀತೆ, ಡಿ.ವಿ.ಕೆ. ಮೂರ್ತಿ, ಮೈಸೂರು - ೧೯೯೬

